# ಸಾಮವೇದ ಸಂಹಿತೆ

## ಋಕ್, ಪದ, ಗಾನ, ಸಾಯಣಭಾಷ್ಯ
## ಕನ್ನಡ ಭಾವಾನುವಾದ, ಪದ್ಯಾನುವಾದ ಸಹಿತ

### ಸಂಪುಟ ೨

### ಐನ್ದ್ರಮ್ ಕಾಣ್ಡಮ್

### ಋಕ್ ೧೧೫ ರಿಂದ ೨೯೨




ದ್ರಾಹ್ಯಾಯಣ ಪ್ರತಿಷ್ಠಾನ ಪ್ರಕಾಶನ

# ಸಾಮವೇದ ಸಂಹಿತೆ

## ಋಕ್, ಪದ, ಗಾನ, ಸಾಯಣಭಾಷ್ಯ
## ಕನ್ನಡ ಭಾವಾನುವಾದ, ಪದ್ಯಾನುವಾದ ಸಹಿತ

**ಸಂಪುಟ ೨**

ಐನ್ದ್ರಮ್ ಕಾಣ್ಡಮ್

ಋಕ್ ೧೧೫ ರಿಂದ ೨೯೨



ದ್ರಾಹ್ಯಾಯಣ ಪ್ರತಿಷ್ಠಾನ ಪ್ರಕಾಶನ

# ಸಾಮವೇದ ಸಂಹಿತೆ

## ದ್ವಿತೀಯ ಸಂಪುಟ

ಐನ್ದ್ರ ಕಾಂಡ
ಋಕ್ ೧೧೫ ರಿಂದ ೨೯೨

ಸಂಪಾದಕರು ಮತ್ತು ಪ್ರಕಾಶಕರು
ದ್ರಾಹ್ಯಾಯಣ ಪ್ರತಿಷ್ಠಾನ
ನಂ ೮೦೧, ೩ನೆಯ ಮುಖ್ಯ ರಸ್ತೆ,
೪ನೆಯ ಬ್ಲಾಕು, ರಾಜಾಜಿನಗರ, ಬೆಂಗಳೂರು ೧೦
ದೂರವಾಣಿ ೨೩೧೫೩೨೪೮

ಪ್ರಥಮ ಮುದ್ರಣ ೨೦೧೦



ಬೆಲೆ ರೂ ೨೫೦/-

# ದ್ರಾಹ್ಯಾಯಣ ಪ್ರತಿಷ್ಠಾನ – ಪರಿಚಯ

ಸಾಮವೇದದ ಅಧ್ಯಯನ ಆಧ್ಯಾಪನ ಇನ್ನೂ ಹೆಚ್ಚಾಗಿ ಬೆಳೆಯಲು ಅನುಕೂಲವಾಗುವಂತೆ ಸಾಮವೇದ ಗ್ರಂಥಗಳನ್ನು ಕನ್ನಡದಲ್ಲಿ ಸಂಪಾದಿಸಿ ಯಥಾಶಕ್ತಿ ಪ್ರಕಟಿಸಿ ಪ್ರಚಾರಮಾಡಬೇಕೆಂಬ ಅಭಿಲಾಷೆಯುಳ್ಳ ಸಾಮವೇದಾಧ್ಯಯನ ಆಸಕ್ತರಿಂದ 'ದ್ರಾಹ್ಯಾಯಣ ಪ್ರತಿಷ್ಠಾನ' ವೆಂಬ ಸಂಸ್ಥೆ ರೂಪುಗೊಂಡಿದೆ. ಸಾಮವೇದದಲ್ಲಿ ಆಸಕ್ತಿ ಇರುವವರೆಲ್ಲರೂ ಯಾವಶುಲ್ಕವೂ ಇಲ್ಲದೆ ಈ ಸಂಸ್ಥೆಯ ಸದಸ್ಯರಾಗಿ ಯಥಾಮತಿ ವೇದಪುರುಷನ ಸೇವೆ ಸಲ್ಲಿಸಬಹುದು.

ಕನ್ನಡ ನಾಡಿನಲ್ಲಿ ಪರಂಪರೆಯಿಂದ ಅಸ್ತಿತ್ವದಲ್ಲಿರುವ ಸಾಮವೇದದ ಓಲೇಗರಿ ಹಾಗೂ ಹಸ್ತ ಲಿಖಿತ ಗ್ರಂಥಗಳು ನಾಗರಿ ಲಿಪಿಯಲ್ಲಿರುವುದೇ ಒಂದು ವೈಶಿಷ್ಟ್ಯ. ಈಗೀಗ ಪ್ರಯೋಗ ಕರ್ತೃಗಳು ಕೆಲವರು ತಮ್ಮ ಸ್ವಂತ ಉಪಯೋಗಕ್ಕಾಗಿ ಕನ್ನಡಲಿಪಿಯಲ್ಲಿ ಬರೆದಿಟ್ಟುಕೊಂಡಿರುವ ಪೂರ್ವಾಪರ ಪ್ರಯೋಗ ಗ್ರಂಥಗಳು ಸಂಕ್ಷಿಪ್ತವಾಗಿದ್ದು ವೈದಿಕ ಪ್ರಕ್ರಿಯೆಗಳ ಪರಿಚಯವಿಲ್ಲದ, ಹೊಸದಾಗಿ ಕಲಿಯ ಬಯಸುವವರಿಗೆ ಉಪಾದೇಯವಾಗಿಲ್ಲ. ಸಾಮವೇದದ ಸಮಗ್ರ ಅಧ್ಯಯನ ಅಧ್ಯಾಪನ ಮಾಡಲಾಶಿಸುವವರು ದೇವನಾಗರಿಲಿಪಿಯಲ್ಲಿರುವ / ಗ್ರಂಥಾಕ್ಷರದಲ್ಲಿರುವ ಮುದ್ರಿತ ಗ್ರಂಥಗಳನ್ನೇ ಆಶ್ರಯಿಸಬೇಕಾಗಿದೆ. ಈ ಗ್ರಂಥಗಳು ಕನ್ನಡಲಿಪಿಯಲ್ಲಿ ಪ್ರಕಟವಾಗಿಲ್ಲದಿರುವದೂ ಕನ್ನಡಿಗ ಸಾಮವೇದಿಗಳು ಅಧ್ಯಯನ ಅಧ್ಯಾಪನಗಳಲ್ಲಿ ಉತ್ಸಾಹ ತಾಳದಿರುವುದಕ್ಕೆ ಒಂದು ಕಾರಣವಾಗಿದೆ. ಈ ಕೊರತೆಯನ್ನು ತುಂಬಬೇಕೆಂಬುದೇ ದ್ರಾಹ್ಯಾಯಣ ಪ್ರತಿಷ್ಠಾನದ ಆಶಯವಾಗಿದೆ.

ಈ ಹಿನ್ನಲೆಯಲ್ಲಿ ನಮಗೆ ಸಿಕ್ಕಿರುವ ನಾಗರೀ ದೇವನಾಗರೀ ಗ್ರಂಥಾಕ್ಷರಗಳ ಓಲೇಗರಿ, ಹಸ್ತಲಿಖಿತ ಹಾಗೂ ಮುದ್ರಿತ ಸಾಮವೇದ ಗ್ರಂಥಗಳಲ್ಲಿ ಕಂಡುಬರುವ ಪಾಠಾಂತರಗಳನ್ನು ಗುರುತಿಸಿ, ವ್ಯತ್ಯಯಗಳನ್ನು ವಿದ್ವಾಂಸರ ಗಮನಕ್ಕೆ ತಂದು, ಅವರ ಸಲಹೆಯಂತೆ ಆಧಾರ ಗ್ರಂಥಗಳ ಸ್ಥಳ ನಿರ್ದೇಶಿಸಿ ಖಚಿತ ಪಾಠವನ್ನು ನಿರ್ಧರಿಸಲಾಗುತ್ತದೆ. ನಿರ್ಧರಿಸಾಲಾಗದ ಅಂಶಗಳು ಆಯಾಗ್ರಂಥಗಳ ಪರಿಶಿಷ್ಟದಲ್ಲಿ ಚರ್ಚೆಗಾಗಿ ಮಂಡಿಸಲ್ಪಡುತ್ತವೆ. ಈ ಪೂರ್ವಸಿದ್ಧತೆಯ ನಂತರ ವೈದಿಕ ಪ್ರಕ್ರಿಯೆಗಳ ಆನುಪೂರ್ವಿಯ ಪರಿಚಯವಿಲ್ಲದೆಯೂ ಕನ್ನಡದಲ್ಲಿ ಸಾಮವೇದ ಸಂಹಿತೆಯನ್ನು ಋಕ್ ಪದ ಗಾನ ಭಾಷ್ಯ ಅರ್ಥ ವಿಶೇಷ ವಿಷಯಗಳನ್ನೂ ಅಭ್ಯಾಸಮಾಡಲು ಪ್ರಯೋಗಗಳನ್ನು ಕಲಿಯಬಯಸುವವರಿಗೆ ಅನುಕೂಲವಾಗುವಂತೆ ಮನ್ತ್ರ, ತನ್ತ್ರ, ಅನುಷ್ಠಾನ ಕ್ರಮಗಳನ್ನೂ ಯಥಾಮತಿ ಸಂಕ್ಷಿಪ್ತವಾಗಿ ಮನ್ತ್ರಾರ್ಥಗಳನ್ನೂ ಪ್ರತೀಕಗಳ ಪರಿಚಯವನ್ನೂ ಸೂಕ್ತ ಟಿಪ್ಪಣಿಗಳನ್ನೂ ಕನ್ನಡದಲ್ಲಿ ಬರೆದು ಯಥಾನುಕೂಲವಾಗಿ ಪ್ರಕಟಿಸುವ ಕೈಂಕರ್ಯವನ್ನು ದ್ರಾಹ್ಯಾಯಣ ಪ್ರತಿಷ್ಠಾನ ನೆರವೇರಿಸುತ್ತಿದೆ.

ಕನ್ನಡ ಭಾಷೆಯಲ್ಲಿ ಪ್ರಪ್ರಥಮವಾಗಿ 'ಸಾಮವೇದ ಪರಿಚಯ', 'ನಿತ್ಯಾಹ್ನಿಕ', 'ಪೂರ್ವ ಪ್ರಯೋಗ', ದ್ರಾಹ್ಯಾಯಣ ಶ್ರಾದ್ಧ ಪ್ರಯೋಗ', 'ಅಪರ ಪ್ರಯೋಗ', 'ಸಾಮವೇದ ಸಂಹಿತೆ – ಒಂದನೆಯ ಸಂಪುಟ' ಎಂಬ ಆರು ಗ್ರಂಥಗಳು ೧/೮ರ ೨೧೫೦ ಪುಟಗಳಲ್ಲಿ ವಿಭಕ್ತವಾಗಿ ೧೯೯೬ ರಿಂದ ಇದುವರೆಗೆ ಪ್ರಕಟವಾಗಿವೆ. ಈ ಗ್ರಂಥಗಳು ಶಾಸ್ತ್ರೀಯವಾಗಿ ಸಂಪಾದಿಸಲ್ಪಟ್ಟು ಮನ್ತ್ರ ಅರ್ಥ ಆಧಾರ ವಿವರಣೆ ಟಿಪ್ಪಣಿಗಳೊಂದಿಗೆ ಕನ್ನಡ ಭಾಷೆಯಲ್ಲಿ ಪ್ರಕಟವಾಗಿರುವದನ್ನು ವಿದ್ವಾಂಸರೂ ವಿದ್ಯಾಸಂಸ್ಥೆಗಳೂ ಸಂಶೋಧನಾನಿರತರೂ ಅಧ್ಯಯನ ಅಧ್ಯಾಪನನಿರತರೂ ಪ್ರಯೋಗಕರ್ತೃಗಳೂ ವೇದದ ಬಗ್ಗೆ ಆಸಕ್ತಿ ಕುತೂಹಲವುಳ್ಳವರೂ ಸ್ವಾಗತಿಸಿ ಆದರದಿಂದ ಬರಮಾಡಿಕೊಂಡಿದ್ದಾರೆ. ಇದೀಗ ಸಾಮವೇದ ಸಂಹಿತೆಯ ದ್ವಿತೀಯ ಸಂಪುಟವಾಗಿ ಐನ್ದ್ರಕಾಂಡ ಪ್ರಥಮ ಭಾಗವನ್ನು ಪ್ರಕಟಿಸಿ ನಮ್ಮ ಸಮಾಜಕ್ಕೆ ಬಹುನಮ್ರತೆಯಿಂದ ಅರ್ಪಿಸಲಾಗಿದೆ.

'ಯಜ್ಞಾರ್ಥಾತ್ ಕರ್ಮಣೋನ್ಯತ್ರ . . . । 'ಕರ್ಮಬ್ರಹ್ಮೋದ್ಭವಂ ವಿದ್ಧಿ . . . । 'ಕರ್ಮಣೈವ ಹಿ ಸಂಸಿದ್ಧಿಮ್ . . . ' – ಛಾಂ.ಉ. ೫.೧೦.೬–೮, ಬೃ.ಉ ೬.೨.೧೬, ಭ.ಗೀ. ೩.೯, ೧೫.೨೦ ॥ ಇತ್ಯಾದಿ ಉಪದೇಶಗಳನ್ನು ಸ್ಮರಿಸಿ, ಮನ್ತ್ರಾರ್ಥಗಳನ್ನು ತಿಳಿದು, ಶ್ರದ್ಧಾ ಭಕ್ತಿಗಳಿಂದ ವಿಧ್ಯುಕ್ತವಾಗಿ ಆಚರಿಸುವ ಕರ್ಮ ವೀರ್ಯವತ್ತಾಗಿ ಸಮೃದ್ಧ ಫಲವನ್ನು ಪಡೆಯಲು ಕರ್ತೃವಿಗೆ ನೆರವಾಗುವುದೇ ದ್ರಾಹ್ಯಾಯಣ ಪ್ರತಿಷ್ಠಾನದ ಧ್ಯೇಯವಾಗಿದೆ.

ಯುಗಾದಿ
ಶ್ರೀ ವಿಕೃತಿ ಸಂವತ್ಸರ
೧೬–೦೩–೨೦೧೦

ಟಿ. ಗೌರೀಪತಿ
ಅಧ್ಯಕ್ಷರು
ದ್ರಾಹ್ಯಾಯಣ ಪ್ರತಿಷ್ಠಾನ

# ಸಂಪಾದಕರ ಬಿನ್ನಹ

ಇದೀಗ ಸಾಮವೇದ ಸಂಹಿತೆಯ ತೃತೀಯ ಸಂಪುಟ ಐನ್ದ್ರಕಾಂಡ ಪ್ರಥಮ ಭಾಗವನ್ನು ನಮ್ಮ ಸಮಾಜಕ್ಕೆ ಅರ್ಪಿಸಲು ಸಂತೋಷವಾಗುತ್ತಿದೆ. ಆಗ್ನೇಯಕಾಂಡವೆಂಬ ಹಿಂದಿನ ಪ್ರಥಮ ಸಂಪುಟದಂತೆಯೇ ಋಕ್ ಪದ ಗಾನ ಸಾಯಣಭಾಷ್ಯ ಕನ್ನಡದಲ್ಲಿ ಪ್ರತಿಪದಾರ್ಥ ವಿಶೇಷ ವಿಷಯಗಳು ಭಾವಾರ್ಥ ಕನ್ನಡದ ಪದ್ಯ ಸಹಿತ ಈ ಸಂಪುಟಗಳಲ್ಲಿ ರೂಪುಗೊಂಡಿವೆ. ಹಿಂದಿನ ಸಂಪುಟಗಳನ್ನು ಬೆಳಕಿಗೆ ತರಲು ಸಹಕಾರ ನೀಡಿರುವ ಮಹಾನುಭಾವರೆಲ್ಲರೂ ಅದೇ ಭಕ್ತಿ ಶ್ರದ್ಧೆ ಉದಾರತೆಯಿಂದ ಈ ಸಂಪುಟದ ಕೈಂಕರ್ಯವನ್ನೆಸಗಿದ್ದಾರೆ. ಹಿಂದಿನ ಸಂಪುಟದಲ್ಲಿನ ಮನ್ತ್ರಗಳ ಸಾರಸರ್ವಸ್ವವನ್ನು ಕನ್ನಡ ಪದ್ಯಗಳಲ್ಲಿ ಹಿಡಿದಿಟ್ಟಿರುವ ಶತಾವಧಾನಿ ಡಾ. ಆರ್. ಗಣೇಶ್‌ರವರೇ, ಈ ಸಂಪುಟದ ಮನ್ತ್ರಗಳ ಹಿರಿದರ್ಥಗಳನ್ನೂ ಪುಟ್ಟಪುಟ್ಟ ಕನ್ನಡ ಪದ್ಯಗಳೆಂಬ ನಕ್ಷತ್ರಪುಂಜಗಳಲ್ಲಡಗಿಸಿ ಕನ್ನಡಿಗರ ಮನೆಯಂಗಳದಲ್ಲಿ ಪ್ರಪ್ರಥಮವಾಗಿ ಪ್ರತಿಷ್ಠಿಸಿ ವೇದಪುರುಷನ ಆರಾಧನೆಗೆ ಅನುವು ಮಾಡಿಕೊಟ್ಟಿದ್ದಾರೆ. ಋಷಿಸ್ವರೂಪವಾದ ಈ ಎಲ್ಲಾ ಮಹಾಮನಸ್ಸಿನವರಿಗೆ ವೇದಪುರುಷನು ಶಾಂತಿಸಮೃದ್ಧಿಯನ್ನು ನೀಡಿ ತನ್ನ ಕೃಪೆಯನ್ನು ಮಳೆಗರೆಯುತ್ತಲಿರಲೆಂದು ಮುಡಿಚಾಚಿ ಪ್ರಾರ್ಥಿಸುತ್ತೇವೆ.

ಯುಗಾದಿ
ಶ್ರೀ ವಿಕೃತಿ ಸಂವತ್ಸರ
೧೬-೦೩-೨೦೧೦

ಸಂಪಾದಕ ಮಂಡಲಿ
ದ್ರಾಹ್ಯಾಯಣ ಪ್ರತಿಷ್ಠಾನ

|| ಓಮ್ ನಮಃ ಸಾಮವೇದಾಯ ||

# ಸಾಮವೇದ ಕೌಥುಮಶಾಖೆಯ
# ಛನ್ದ ಆರ್ಚಿಕ ಸಂಹಿತೆ ಮತ್ತು ಸಾಮಗಾನ ಸಂಹಿತೆ
# ಅಥ ಐನ್ದ್ರಮ್ ಕಾಣ್ಡಮ್

## ಋಕ್ ೧೧೫

ಶಂಯುರ್ಬಾರ್ಹಸ್ಪತ್ಯಃ । ಗಾಯತ್ರೀನ್ದ್ರಃ ॥

೧ ೨ ೩ ೧ ೨೦ ೩ ೨ ೩ ೧ ೨
ತದ್ವೋ ಗಾಯಸುತೇ ಸಚಾ ಪುರುಹೂತಾಯ ಸತ್ವನೇ ।

೨u ೩ ೨ ೩ ೧ ೨
ಶಂ ಯದ್ಗವೇ ನ ಶಾಕಿನೇ ॥ ೧.೧೧೫ ॥

೨ ೩ ೨ ೧ ೨೦ ೩ ೧ ೨ ೩ ೧
ತತ್ - ವಃ - ಗಾಯ - ಸುತೇ - ಸಚಾ । ಪುರುಹೂತಾಯ - ಪುರು - ಹೂತಾ

೨ ೧ ೨೦ ೧ ೨೦ ೩ ೧ ೨
ಯ - ಸತ್ವನೇ ॥ ಶಂ - ಯತ್ - ಗವೇ - ನ - ಶಾಕಿನೇ ॥ ೧.೧೧೫ ॥

ಮಾರ್ಗೀಯವವಮ್ । ಮೃಗಯುರ್ಗಾಯತ್ರೀನ್ದ್ರಃ ॥

೫ ೦ ೪ ೫ ೧ ^ ೩ ೨^ ೩ ೫
೧೧೫.೧. ತದ್ವೌಹೋವಾ ॥ ಗಾಯಾ೭೨ । ಸುತಾಇಸಾ೭೨೩೪ಚಾ ।

೧ ೨೦ ೦ ೧ ೨ ೧
ಪುರುಹೂತಾ । ಯಸಾತ್ವಾ೭೧ನಾ೭೨ಇ ॥ ಶಂಯತ್ ।

೨ ^ ೨^ ೩ ೫ ೧ ^ ೩
ಹಾ । ಔ೭೩ಹೋಇ । ಗಾ೭೨೩೪ವಾಇ ॥ ನಾ೭೨ಶಾ೭೨೩

೫೦ ೦ ೨ ^ ೧ ೧೧೧
ಳಔಹೋ೯ವಾ ॥ ಏ೨೩ । ಕಿನೇ೨೨೩ಳ೫ ॥

ದೀ - ೫ । ಪ - ೧೨ । ಮಾ - ೬ । ಪೂ । ೧ । ೧೮೧ ॥

ರಾದ್ರೇ ದ್ವೇ । ದ್ವಯೋಃ ರುದ್ರೋ ಗಾಯತ್ರೀಸ್ಸ್ವಃ ॥

೫ ೦ ೦ ೨ ^ ೧ ೦
೧೧೫.೨. ತದ್ವೋಗಾಯಾ ॥ ಸುತಾಇಸಚಾ೨೩ । ಪೂರೂ೨೨೩ಹೂ

೨ ೩೦ ೨ ^ ೧ ೨೩ ೫ ೨
ತಾ೨೩ಳ । ಹಾಹೋ೯೨೩ । ಯಾಸತ್ವಾ೨೨೩ಳನಾಇ ॥ ಶಂ

೧ ೨ — — ೧
ಯದ್ಗಾ೨೨೩ವೇ ॥ ನಶೌ೨೨ । ಹೌ೨೨ । ಹುವೋ೯೨೩ಳ ।

೫ ೪ ॥ ೫
ವಾ ॥ ಕಾ೨೫ಇನೋ೯೨೬ಹಾಇ ॥

ದೀ - ೪ । ಪ - ೧೧ । ಮಾ - ೪ । ತೀ । ೨ । ೧೮೨ ॥

೫ ೦ ೦ ೦ ೫ ೨ ೦ ೧೦
೧೧೫.೩. ತದ್ವೋಗಾಯಸುತೇಸಚಾ೨೬ಏ ॥ ಪುರುಹೂತಾಯಸತ್ವ

೨೦ ೧ ೨೦ ೦ ೧ ೮ ೨ ೫
ನೇ । ಪುರುಹೂತಾ । ಯಾಸತ್ವಾ೨೨೩ನಾ೨೩ಳಇ ॥ ಶಂಯ

೨ ^ ೩ ೫ ^ ೪ ೨ ^
ತ್ । ಗೌ ವಾ೬೨೨೩ಳವಾ ॥ ನಾ೨೨೩ಶಾ೨೩ ॥ ಕಾ೨೩ಳ

॥ ೫
೫ಇನೋ೯೨೬ಹಾಇ ॥

ದೀ - ೮ । ಪ - ೮ । ಮಾ - ೬ । ಡೂ । ೩ । ೧೮೩ ॥

ಈನಿಧನಮ್ ಮಾರ್ಗೀಯವಮ್ । ಮೃಗಯುಃ ಗಾಯತ್ರೀನ್ದ್ರಃ ॥

೫ ೦ ೦ ೦ ೫ ೨ ೦ ೧೦
೧೧೫.೪. ತದ್ವೋಗಾಯಸುತೇಸಚಾ೩೭ಐ ॥ ಪುರುಹೂತಾಯಸತ್ವ

೨
ನಾಇ ॥ ಶಂಯದ್ಗಾ೨೩ವೇ ॥ ಐ೨ಹೋ೧ಆ೨

೨ ೧ ೧ ^ ೫೦೦
೩ಇಹೀ । ನಶಾ೨೩ । ಕಾ೨೩ಇನಾ೨೩೪ಔಹೋವಾ ॥

೩ ೧೧೧
ಈ೨೩೪೫ ॥

ದೀ - ೭ । ಪ - ೭ । ಮಾ - ೬ । ಥೂ । ೪ । ೧೮೪ ॥

ಹೇ ಸ್ತೋತಾರಃ **ವಃ** ಯೂಯಮ್ **ಸುತೇ** ಅಭಿಷುತೇ ಸೋಮೇ ಸತಿ **ಪುರುಹೂತಾಯ** ಬಹುಭಿರ್ಯಜಮಾನೈರಾಹುತಾಯ **ಸತ್ವನೇ** ಶತ್ರೂಣಾಂ ಸಾದಯಿತ್ರೇ ಯದ್ವಾ ಧನಾನಾಂ ಸನಿತ್ರೇ ದಾತ್ರೇ ಇನ್ದ್ರಾಯ **ತತ್** ಸ್ತೋತ್ರಮ್ **ಸಚಾ** ಸಹ ಸಂಹತಾ ಭೂತ್ವಾ**ಗಾಯ** ಗಾಯತ **ಯತ್** ಸ್ತೋತ್ರಂ **ಶಾಕಿನೇ** ಶಕ್ತಿಮತೇ ಇನ್ದ್ರಾಯ **ಶಮ್** ಸುಖಕರಂ ಭವತಿ । **ಗವೇ** ನ ಯಥಾ ಗವೇ ಯವಸಂ ಸುಖಕರಂ ತದ್ವದಿತ್ಯರ್ಥಃ ॥

ವಿವರಣ ಮತೇ 'ಶಾಕಿನೇ-ಗವೇ' ಇತಿ ವಿಶೇಷ್ಯ ವಿಶೇಷಣ । ತಥಾ ಚ - ಯಥಾ ಕಶ್ಚಿತ್ ಕೃಷೀವಲಃ ಶಕ್ತಿಮತೋ ವೃಷಭಸ್ಯ ಸುಖಕರಾಃ ಸ್ತುತೀರುಚ್ಚಾರಯತಿ ತದ್ವದಿನ್ದ್ರಸ್ಯ ಸುಖಕರಂ ಸ್ತೋತ್ರಮುಚ್ಚಾರಯೇ ತ್ಯರ್ಥಃ ಸಂಪನ್ನಃ ॥

ವಃ ನೀವು, ಸುತೇ ಸೋಮರಸವು ಸಿದ್ಧವಾಗುವವರೆಗೆ, ಪುರುಹೂತಾಯ ಅನೇಕ ಯಜಮಾನರುಗಳಿಂದ ಪರಿಪರಿಯಾಗಿ, ಆಹ್ವಾನಿಸಲ್ಪಟ್ಟಿರುವ,

ಸತ್ವನೇ ಧನದಾಯಕನಾದ, ಶತ್ರುನಾಶಕನಾದ ಇನ್ದ್ರನಿಗಾಗಿ, ತತ್ ಆ ಸ್ತೋತ್ರಗಳನ್ನು, ಸಚಾ ಎಲ್ಲರೂ ಸೇರಿ ಸಮಷ್ಟಿಯಾಗಿ, ಗಾಯ ಗಾನಮಾಡಿ, ಗವೇನ ಒಳ್ಳೆಯ ಹುಲ್ಲು ಆದಿ ಮೇವು ಗೋವುಗಳಿಗೆ ಸಂತೋಷವನ್ನುಂಟು ಮಾಡುವಂತೆ, ಯತ್ ಈ ಸ್ತೋತ್ರಗಳು, ಶಾಕಿನೇ ಶಕ್ತಿಸಂಪನ್ನನಾದ ಇನ್ದ್ರ ನಿಗೆ, ಶಮ್ ಸುಖವನ್ನುಂಟು ಮಾಡುತ್ತವೆ.

ಸ್ತೋತ್ರಗಣವೇ ನೀವು ಸೋಮಾಭಿಷದ ಅಂದರೆ ಸೋಮರಸವನ್ನು ಸಿದ್ಧಮಾಡುವ ಕಾಲದಲ್ಲಿ ಅನೇಕ ಯಜಮಾನರಿಂದ ಪರಿಪರಿಯಾಗಿ ಆಹ್ವಾನಿಸ ಲ್ಪಟ್ಟಿರುವ ಧನದಾಯಕನೂ ಶತ್ರುನಾಶಕನೂ ಬಹುಶಕ್ತಿಸಂಪನ್ನನೂ ಆದ ಇನ್ದ್ರನು - ಹಸುಗಳು ಒಳ್ಳೆಯ ಮೇವಿನಿಂದ ಸುಖಪಡುವಂತೆ, ಸಂತೋಷಪಡು ವಂತೆ ಎಲ್ಲರೂ ಒಟ್ಟಾಗಿ ಸೇರಿ ಸಮಷ್ಟಿಯಾಗಿ ಸಾಮಗಳನ್ನು ಗಾನಮಾಡಿ. ಪರಮಾನಂದ ಪ್ರಾಪ್ತಿಗಾಗಿ ನಡೆಸುತ್ತಿರುವ ಈ ಆತ್ಮಯಜ್ಞದಲ್ಲಿ ಇನ್ದ್ರಿಯಗಣ ಗಳಿಂದ ಪೂಜಿತನಾದ ಮನೋರೂಪಿಯಾದ ಇನ್ದ್ರನು ಕಲ್ಯಾಣಕಾರಿ ಜ್ಞಾನ ಕರ್ಮಗಳಾಚರಣೆಗೆ ಅನುಕೂಲವಾಗುವಂತೆ ಸ್ತುತಿಸಿ.

ಸೋಮರಸ ಸಜ್ಜಾಗುವನ್ನೆಗಂ ಪುರುಹೂತನಂ
ಇಂದ್ರನಂ ನುತಿಸಿರೊಕ್ಕೊರಲಿನಿಂ ಮೇವಿನಿಂದಂ
ಗೋವು ನಲಿವಂತೆ ನಲಿದಪಂ ದೇವದೇವಂ ॥

## ಋಕ್ - ೧೧೬

ಪ್ರುತಕಕ್ಷಃ ಸುಕಕ್ಷೋ ವಾ ಆಂಗಿರಸಃ । ಗಾಯತ್ರೀನ್ದ್ರಃ ॥

೧ ೨ ೩ ೧ ೨ ೩೧೨ ೩ ೧ ೨೩ ೧ ೨
ಯಸ್ತೇನೂನꣳ ಶತಕ್ರತವಿನ್ದ್ರ ದ್ಯುಮ್ನಿತಮೋ ಮದಃ ।

೧ ೨ ೩ ೧ ೨೦
ತೇನ ನೂನಂ ಮದೇ ಮದೇಃ ॥ ೨.೧೧೬ ॥

೨ ೩ ೨ ೩ ೩ ೨೦ ೩ ೧ ೨
ಯಃ - ತೇ - ನೂನಂ - ಶತಕ್ರತೋ - ಶತ - ಕ್ರತೋ । ಇನ್ದ್ರ - ದ್ಯುಮ್ನಿತಮಃ

೧ ೨೦ ೧ ೨೦ ೩ ೨ ೧ ೨೦ ೩
- ಮದಃ ॥ ತೇನ - ನೂನಂ - ಮದೇ - ಮದೇಃ ॥ *೨.೧೧೬ ॥*

ಆಶ್ವಮ್ । ಅಶ್ವೋ ಗಾಯತ್ರೀನ್ದ್ರಃ ॥

೪ ೦ ೦ ೪ ೧ ೦
೧೧೬.೧. ಯಸ್ತೇನೂನಾऽಶಿಜ್ ಶತಕ್ರತಾಉ ॥ ಇನ್ದ್ರದ್ಯುಮ್ನಿತಮೋ

೧ ೨೦ ೧ ೦ ೨ ೧ ನ
ಮಾऽ೨ದಾಃ ॥ ತೇನನೂನಾऽ೨೩ಮ್ಮಾ ॥ ದಾಇಮಾऽ೩

೨ ೧೧೧
ಉವಾऽ೩ ॥ ದೇऽ೨೩೪ಶಿಃ ॥

*ದೀ - ೫ । ಪ - ೫ । ಮಾ - ೫ । ಮು । ೫ । ೧೮೫ ॥*

ಅತ್ರ ಸೋಮಃ ಸ್ತೂಯತೇ - ಹೇ **ಶತಕ್ರತೋ!** ಶತವಿಧ ಪ್ರಜ್ಞಾನ! ಹೇ **ಇನ್ದ್ರ! ದ್ಯುಮ್ನಿತಮಃ** ಯಶಸ್ವಿತಮಃ **ಯಃ ಮದಃ** ಮಾದ್ಯನ್ತ್ಯನೇನ ಇತಿ ಮದಃ ಸೋಮಃ ಯಃ ಸೋಮಃ **ನೂನಮ್** ಪುರಾ **ತೇ** ತ್ವದರ್ಥಮ್ ಅಸ್ಮಾಭಿರಭಿಷುತೋऽಸ್ತಿ **ತೇನ** ಅಸ್ಮಾಭಿರ್ದೀಯಮಾನೇನ ಸೋಮೇನ **ನೂನಮ್** ಇದಾನೀಮ್ **ಮದೇ** ತತ್ಪಾನೇನ **ಮದೇ** ತವ ಸಂಜಾತೇ ಸತಿ ಅಸ್ಮಾನಪಿ **ಮದೇಃ** ಧನಾದಿದಾನೇನ ತ್ವಂ ಮಾದಯ । ಮದೀ ಹರ್ಷೇ ಅತ್ರಾನ್ತರ್ಭಾವಿತಣ್ಯರ್ಥಃ । ಛಂದಸಿ ಬಹುಲಮ್ ಇತಿ ಶಪ್ ॥

ಕ್ರತುರಿತಿ ನಿ.ಘಂ.೩.೯.೫ ಪದಮ್ । ಶತಮಿತಿ ಬಹುನಾಮ ನಿ.೩.೧.೧೦ । ಕ್ರತುರಪಿ ಕರ್ಮನಾಮ ನಿಂ.೨.೧.೧೧ । ಶತಂ ಕ್ರತೂನಾಂ ಯಸ್ಯ ಸ ಶತಕ್ರತುಃ ತಸ್ಯ ಸಂಬೋಧನಂ ಶತಕ್ರತೋ । ಬಹು ಕರ್ಮನ್ - ಇತಿ ವಿಂ ॥

ಇನ್ದ್ರಃ ಅನ್ತರಿಕ್ಷಸ್ಥ ದೇವಃ । ಯೋ ಜಾತ ಏವ ಪ್ರಥಮೋ ಮನಸ್ವಾನ್ ದೇವೋ ದೇವಾನ್ ಕ್ರತುನಾ ಪರ್ಯ್ಯಭೂಷತ್ ಯಸ್ಯ ಶುಷ್ಮಾದ್ರೋದಸೀ ಅಭ್ಯಸೇತಾಂ ನೃಮ್ಣಸ್ಯ ಮಹ್ನಾ ಸಜನಾ ಸ ಇನ್ದ್ರಃ । ಇತಿ ಋಕ್ ಸ ಚ ವಾಯುರೇವ ವಾಯುರ್ವೇನ್ದ್ರೋ ವಾ ಅನ್ತರಿಕ್ಷ ಸ್ಥಾನಃ ೭.೩.೧ ಇತಿ ೦ ನೈರುಕ್ತಮ್ ವಾಯುರಿನ್ದ್ರಶ್ಚೈಕ ಏವ ಯಥಾ ಹಸ್ತಃ ಕರಃ - ಇತಿ ತದ್ಭಾಷ್ಯಮ್ । ಇನ್ದ್ರ ಇರಾಂ ದೃಣಾತೀತಿ ವೇರಾಂ ದದಾತೀತಿ ವೇರಾಂ ದಧಾತೀತಿ ವೇರಾಂ ಧಾರಯತ ಇತಿ ॥ ವೇನ್ದ್ರೇ ಭೂತಾನೀತಿ ವಾ । ತದ್ಯದೇನಂ ಪ್ರಾಣೈಸ್ಸಮೈನ್ಧಸ್ತದಿನ್ದ್ರಸ್ಯೇನ್ದ್ರತ್ವಮಿತಿ ವಿಜ್ಞಾಯತೇ ॥ ಇದಂ ಕರಣಾದಿತ್ಯಾಗ್ರಾಯಣಃ ಇದಂ ದರ್ಶನಾದಿತ್ಯೌಪಮನ್ಯವಃ ॥ ಇನ್ದತೇರ್ವೈಶ್ವರ್ಯ ಕರ್ಮಣಃ । ಇಂದಂಚ್ಛತ್ರೂಣಾಂ ಧಾರಯಿತಾ ವಾ ದರಯಿತಾ ವಾ ಯಜ್ಞಾನಾಮ್ ಇತ್ಯಾದಿ ನೈರುಕ್ತಮ್ ೧೦.೧.೮ ಇರಾ ಶಬ್ದೇ ಉಪಪದೇ ದ್ರಣಾತೇರ್ದಧಾತೇರ್ದಾರಯತೇರ್ಧಾರಯತೇರ್ವಾ - ಇತ್ಯಾದಿ ಇರಾಮನ್ನಂ ತೇನ ಸಂಬನ್ಧದ್ವಾ ತದ್ಧೇತು ಹೇತುಕಂ ಬಲಂ ಲಕ್ಷ್ಯತೇ ತೇನ ಬಲ ಲಕ್ಷಿತ ಲಕ್ಷಣಯಾ ತದಾಧಾರಭೂತೋ ಮೇಘಃ - ಇತ್ಯಾದಿ ಚ ದೇವರಾಜಃ ದ್ಯುಮ್ನಂ - ದ್ಯೋತತೇ, ತೇನ ದೀಪ್ತ್ಯಾರ್ಥಸ್ಯ ಅತಿಶಯೇನ ದೀಪ್ತಿತಮಃ । ಇತಿ ವಿಂ ॥ ಮದೇ - ಸಪ್ತಮ್ಯೇಕವಚನಮಿದಂ ತೃತೀಯೈಕವಚನಸ್ಥಾನೇ ದ್ರಷ್ಟವ್ಯಂ ಮದೇನ, ಮದೇಃ ಮಾದ್ಯಸೇತ್ಯರ್ಥಃ - ವಿಂ ॥

**ಶತಕ್ರತೋ** ಜ್ಞಾನವುಳ್ಳವನೇ, ನೂರಾರು ಬಗೆಯ ಯಜ್ಞಾದಿ ಬಹುಮುಖ ಕರ್ಮಗಳಲ್ಲಿ ನಿರತನಾದ ಪರಾಕ್ರಮಿಯೇ, **ದ್ಯುಮ್ನಿತಮಃ** ಪರಮ ಯಶಸ್ವೀ, ಕೀರ್ತಿಯುತ, ಬಹುತೇಜಸ್ವೀ, **ಮದಃ** ಸೋಮರಸ, ಹರ್ಷ, ಆನಂದ, **ಮದೇ** ಆನಂದದಿಂದ, **ನೂನಮ್‌ತೇ** ನಿನಗಾಗಿಯೇ ನಿಶ್ಚಿತರೂಪವಾಗಿ ಸಿದ್ಧಮಾಡಿಟ್ಟಿರುವ, **ಮದೇ** ಧನಾದಿ ಕಾಮನೆಗಳನ್ನು, ಪೂರ್ಣಗೊಳಿಸಿ ನಮಗೆ ಆನಂದವನ್ನುಂಟುಮಾಡು.

ಬಹುಮುಖಜ್ಞಾನವಂತನೂ ನೂರಾರು ಕರ್ಮಗಳಲ್ಲಿ ನಿರತನಾದ ಪರಾಕ್ರಮಿಯೂ ಆದ ಇನ್ದ್ರನೇ ನಿನಗಾಗಿಯೇ ವಿಶೇಷವಾಗಿ ಸಿದ್ಧಮಾಡಿಟ್ಟಿರುವ ನಿನ್ನ ಓಜಸ್ಸನ್ನೂ ತೇಜಸ್ಸನ್ನೂ ಹೆಚ್ಚಿಸುವ ಈ ಸೋಮರಸವನ್ನು ಸ್ವೀಕರಿಸಿ ಹರ್ಷಿತನಾಗಿ ಆನಂದತುಲಿತನಾಗಿ ನಮ್ಮ ಧನಾದಿ ಕಾಮನೆಗಳನ್ನು ಈಡೇರಿಸಿ ಸಂತೋಷಗೊಳಿಸು.

*ಶತಮಖನೆ! ಕೀರ್ತಿಯುತ ತೇಜಸ್ವಿಯೇ! ಸೋಮಮಂ*
*ಸಾನಂದದಿಂ ನಿನಗೆನುತ್ತೆ ನಾಂ ಮೀಸಲಿಟ್ಟೆಂ ।*
*ಸ್ವೀಕರಿಸುತದನೊಲ್ದು ಕರುಣಿಸೈ ವೀರವರ್ಯ ॥*

## ಋಕ್ - ೧೧೭

ಹರ್ಯತಃ ಪ್ರಾಗಾಥಃ । ಗಾಯತ್ರೀನ್ದ್ರಃ । ಅಗ್ನಿರ್ಹವೀಂಷಿ ವಾ ॥

೨ ೩ ೧ ೨ ೩ ೨ ೩ ೨ ೩ ೧ ೨ ೩ ೧ ೨
**ಗಾವ ಉಪ ವದಾವಟೇ ಮಹೀ ಯಜ್ಞಸ್ಯ ರಪ್ಸುದಾ ।**

೩ ೧ ೨೦ ೩ ೧ ೨
**ಉಭಾ ಕರ್ಣಾ ಹಿರಣ್ಯಯಾ ॥ ೩.೧೧೭ ॥**

೧ ೨೦ ೧ ೨೦ ೩ ೨ ೩ ೧ ೨ ೩ ೧ ೨ ೩ ೧ ೨ ೩ ೨
**ಗಾವಃ - ಉಪ - ವದ - ಅವಟೇ । ಮಹೀ ಇತಿ - ಯಜ್ಞಸ್ಯ - ರಪ್ಸುದಾ - ರಪ್ಸು**

೩ ೨ ೧ ೨೦ ೩ ೧ ೨
**- ದಾ ॥ ಉಭಾ - ಕರ್ಣಾ - ಹಿರಣ್ಯಯಾ ॥ ೩.೧೧೭ ॥**

ಐಟತೇ ದ್ವೇ । ದ್ವಯೋರಿಟನ್ನಾನ್ ಗಾಯತ್ರೀನ್ದ್ರಃ ॥

೪೦ ೫ ೪ ೫ ೨ ^ ೧ ^ ೩
**೧೧೭.೧. ಗಾವಃ । ಏಗಾವಾಃ ॥ ಉಪವ । ದಾ೨೩ । ವಾ೨೨ದಾ೨೨೩**

೫೦ ೦ ೩ ೫ ೨ ^ ೩
೪ಔಹೋವಾ । ವಾಽ೨೩೪ಟೇ ॥ ಮಹೀಯಾಽ೨೩೪

೫ ೩ ೨ ೧ ^ ೩ ೫೦ ೦ ೩
ಜ್ಞಾ । ಸ್ವರಾಽ೩ । ಸ್ಯಾಽ೨ರಾಽ೨೩೪ಔಹೋವಾ । ಪ್ಸೂಽ೨

೫ ೨ ^ ೩ ೫ ೩ ೨ ೧ ^
೩೪ದಾ । ಉಭಾಕಾಽ೨೩೪ರ್ಣಾ ॥ ಹಿರಾಽ೩ । ಹಾಽ೨ಇ

೩ ೫೦ ೦ ೩ ೫
ರಾಽ೨೩೪ಔಹೋವಾ ॥ ಣ್ಯಾಽ೨೩೪ಯಾ ॥

ದೀ - ೭ / ಪ - ೧೪ / ಮಾ - ೬ // ಝೂ / ೬ / ೧೮೬ //

೨ ^ ೩ ೫ ೨ ೧ ೨^ ೩
೧೧೭.೨. ಓಇಗಾಽ೨೩೪ವಾಃ ॥ ಉಪವಾಽ೩ದಾ । ವಾಟಾಓಽ೨೩

೫ ೨ ೧೦ ೨ ೧ ೨ ೨^ ೩ ೫
೪ವಾ । ಮಹೀಯಜ್ಞಸ್ಯರಪ್ಸುದಾಽ೩ ॥ ಓಊಽ೨೩೪ಭಾ ॥

೧ ೨^ ೩ ೫ ೨ ೧ ೧೧೧
ಕಾರ್ಣಾಓಽ೨೩೪ವಾ ॥ ಹಿರಣ್ಯಾಯಾಽ೨೩೪೫ ॥

ದೀ - ೧ / ಪ - ೭ / ಮಾ - ೫ / ಖು / ೭ / ೧೮೭ //

ಹೇ **ಗಾವಃ** ಘರ್ಮದುಘಾಃ । ಯೂಯಮ್ **ಅವಟೇ** ಅವಟಂ ಮಹಾವೀರಂ ಪ್ರತಿ **ಉಪವದ** ಉಪಾವತ ವರ್ಣವ್ಯತ್ಯಯಃ (೩.೪.೯೮) ಉಪಾಗಚ್ಛತ । **ಯಜ್ಞಸ್ಯ** ಘರ್ಮಯಾಗಸ್ಯ ಸಾಧನಭೂತೇ **ರಪ್ಸುದಾ** ರಪ್ಸುದೇ ಆ ರಿಪ್ಸೋಃ ಫಲದೇ ರಿಪ್ಸುರಿಪ್ಸನೋರ್ದಾತವ್ಯೇ ವಾ ಯದ್ವಾ ರಪಣಂ ಶಬ್ದನಂ ರಪ್ ಮನ್ತ್ರಃ ತೇನ ಸುದಾತವ್ಯೇ ಅಥವಾ ಷುದ ಕ್ಷರಣೇ (ಭ್ವಾ-ಆ) ರಪಾ ಮನ್ತ್ರೇಣ ಕ್ಷಾರಣೀಯೇ ದೋಹನೀಯೇ ಈದೃಶೇ ಗವಾಜಯೋಃ ಪಯಸೀ **ಮಹೀ** ಮಹತೀ ಬಹುಲೇ ಅಪೇಕ್ಷಿತೇ ಅತ ಉಪಾವತ ಗೋ ಶಬ್ದೋ

ಅಜಾಯಾ ಅಪ್ಯುಪಲಕ್ಷಕಃ ಅಜಾ ಪಯಸೋಽಪಿ ಮಹಾವೀರೇ ಆಸೇಚನೀಯತ್ವಾತ್ । ಅಪಿ ಚ ಅಸ್ಯ ಮಹಾವೀರಸ್ಯ ಉಭಾ **ಉಭೌ ಕರ್ಣಾ** ಕರ್ಣಸ್ಥಾನೀಯೌ ದ್ವೌ ರುಕ್ಮೌ **ಹಿರಣ್ಯಯಾ** ಹಿರಣ್ಮಯೌ ಸುವರ್ಣ ರಜತ ಮಯಾವಿತ್ಯರ್ಥಃ । **ಗಾವಃ** ಹೇ ಮದೀಯಾ ವಾಚಃ ಅವಟೇ ಅವಟಂ ಮೇಘಮ್ **ಮಹೋ** ಮಹತ್ಯೌ ಚ ದ್ಯಾವಾಪೃಥಿವ್ಯೌ **ಉಪ** ಉಪಗಮ್ಯ **ವದ** ವದತ । ಕೀದೃಶಮ್ ಮೇಘಮ್ । ಉಭಾ ಕರ್ಣೌ ಹಿರಣ್ಮಯಾ ಉಭೌ ಕರ್ಣೌ ಹಿರಣ್ಮಯೋ ಯಸ್ಯ । ಕೀದೃಶೌ ದ್ಯಾವಾಪೃಥಿವ್ಯೌ । ಯಜ್ಞಸ್ಯ **ರಪ್ಸುದಾ** ಯಜ್ಞಸ್ಯ ರೂಪದೇ ॥ ೪೦ ॥ **ಉಪವದಾವಟೇ** ಇತಿ ಛಂದೋಗಾಃ **ಉಪಾವತಾವತಮ್** ಇತಿ ಬಹ್ವೃಚಾಃ ॥

ಹಿರಣ್ಯಯಾ ಹಿರಣ್ಮಯೋ ಸುವರ್ಣರಜತಾಮಿತ್ಯರ್ಥಃ ಎಂಬ ವಾಕ್ಯಕ್ಕೆ ಗಾವಃ ಹೇಮದೋಥಾ ವಾಚಃ । ಅವಟೇ ಅವಟಂ ಮೇಘಮ್ ಮಹೀ ಮಹತ್ಯೌ ಚ ದ್ಯಾವಾಪೃಥಿವ್ಯೌ ಉಪ ಉಪಗಮ್ಯ ವದ ವದತ! ಕೀದೃಶಂ ಮೇಘಮ್? ಉಭಾಕರ್ಣಾ ಹಿರಣ್ಯಯಾ ಉಭೌ ಕರ್ಣೌ ಹಿರಣ್ಯಯೌ ಯಸ್ಯ । ಕೀದೃಶೌ ದ್ಯಾವಾಪೃಥಿವ್ಯೌ? ಯಜ್ಞಸ್ಯ ರಪ್ಸುದಾ ಯಜ್ಞಸ್ಯ ರೂಪದೇ । ಆಯಮರ್ಥೋ ವಿವರಣ ಧಾತುಸಮ್ಮತಃ । ಎಂಬುದಾಗಿ ಸತ್ಯವ್ರತ ಸಾಮಾಶ್ರಮೀಭಟ್ಟಾಚಾರ್ಯರು ಟಿಪ್ಪಣಿ ಬರೆದಿರುತ್ತಾರೆ. ಗಾವಃ ಎಂದರೆ ಮೋದ ಸಂತೋಷವಾಚಕ. ಅವಟ ಎಂದರೆ ಮೇಘ, ಸಂತೋಷತರುವ ಮೇಘವೇ, ಮಹತ್ತಾದ ದ್ಯಾವಾಪೃಥ್ವಿಯರ ಬಳಿಗೆ ಬಂದು ಮಾತನಾಡು. ಈ ಮೇಘದ ಎರಡೂ ಕಿವಿಗಳು ಸುವರ್ಣಮಯವಾಗಿವೆ. ದ್ಯಾವಾಪೃಥಿವೀ ಯಜ್ಞದ ರೂಪಕವಾಗಿದೆ.

ಘರ್ಮಯಾಗದಲ್ಲಿ ಪ್ರಧಾನವಾದ ಅಗ್ನಿಗೆ 'ಮಹಾವೀರ' ಎನ್ನುತ್ತಾರೆ. ಈ ಮಹಾವೀರ ಅಗ್ನಿಗೆದುರಾಗಿ ಗೋವುಗಳನ್ನು ಬರುವಂತೆ ಕೇಳಿ ಕೊಳ್ಳುತ್ತಿದ್ದಾರೆ. ಇಲ್ಲಿ ಗೋಶಬ್ದಕ್ಕೆ ಆಡು ಎಂದೂ ಅರ್ಥೈಸಲಾಗಿದೆ. ಈ

ಆಡುಗಳ ಹಾಲನ್ನು - ಘರ್ಮಯಾಗ ಸಾಧನಭೂತವಾದ ಮನ್ತ್ರಗಳನ್ನು ಪಠಿಸುತ್ತಾ ಗಾನ ಮಾಡುತ್ತಾ ಕರೆದು ಆ ಬೆಚ್ಚನೆಯ ಹಾಲನ್ನೇ ಈ ಮಹಾವೀರ ಅಗ್ನಿಯು ಪ್ರಜ್ವಲಿಸುತ್ತಿರುವ ಯಜ್ಞಕುಂಡದಲ್ಲಿ ಸಿಂಪಡಿಸುತ್ತಾರೆ. ಈ ಯಜ್ಞಕುಂಡದ ಎರಡೂ ಕರ್ಣಗಳ ಸ್ಥಾನಗಳನ್ನು ಬೆಳ್ಳಿ ಮತ್ತು ಬಂಗಾರದಿಂದ ಅಲಂಕರಿಸಿರುತ್ತಾರೆ.

ಅವಟೇ - ಮಹಾವೀರಂ, ಪ್ರತಿ - ಮಹಾವೀರ ನಾಮಕ ಅಗ್ನಿಯಿರುವ ಯಜ್ಞಸ್ಥಾನದಲ್ಲಿ ಎಂಬುದು ಇಲ್ಲಿ ಸೂಕ್ತವಾಗಿರುತ್ತದೆ. ಅವಟೇ ಶಬ್ದಕ್ಕೆ ಮೇಘ ಎಂದು ಅರ್ಥಮಾಡಿದರೆ ದ್ಯಾವಾಪೃಥ್ವಿಗಳ ಬಳಿಗೆ ಬಂದು ಮಾತನಾಡು ಎಂದಾಗುತ್ತದೆ.

**ಗಾವಃ** - ಗೋವುಗಳೇ, **ಅವಟೇ** - ಯಜ್ಞಕುಂಡದಲ್ಲಿ ಯಜ್ಞಸ್ಥಾನಕ್ಕೆ, **ಉಪವದ** - ಹರಡಿ ಬಿಜಯಮಾಡಿ, **ಯಜ್ಞಸ್ಯ** - ಘರ್ಮಯಾಗ ಸಾಧನಭೂತ ವಾದ, **ರಪ್ಸುದಾ** - ಮನ್ತ್ರಪೂರ್ವಕವಾಗಿ ಪಡೆಯಬೇಕಾದ ಕ್ಷೀರ ಘೃತ ಆದಿ ಹವಿರ್ದ್ರವ್ಯಗಳನ್ನು ನೀಡುವ, **ಮಹೀ** - ಬಹು ಪುಷ್ಕಳವಾದ ಪ್ರಶಸ್ತವಾದ, **ಉಭಾಕರ್ಣಾ** - ಈ ಮಹಾವೀರ ಅಗ್ನಿಯು ಜ್ವಲಿಸುತ್ತಿರುವ ಯಜ್ಞಕುಂಡದ ಎರಡೂ ಕರ್ಣಗಳು ಸ್ಥಾನಗಳು, **ಹಿರಣ್ಯಯಾ** - ಬೆಳ್ಳಿ ಮತ್ತು ಚಿನ್ನಗಳಿಂದ ಅಲಂಕೃತವಾಗಿವೆ.

ಈ ಘರ್ಮಯಾಗದ ಸಾಧನಭೂತವಾದ ಮನ್ತ್ರಗಳಿಂದ ಹಾಲನ್ನು ಕರೆದು ಮಹಾವೀರನಾಮಕ ಅಗ್ನಿಯ ಕುಂಡದಲ್ಲಿ ಸಿಂಪಡಿಸಲು ಅನುಕೂಲ ವಾಗುವಂತೆ - ಹಾಲು ತುಪ್ಪ ಆದಿ ಹವಿರ್ದ್ರವ್ಯವನ್ನು ಯಥೇಚ್ಛವಾಗಿ ನೀಡುತ್ತಿ ರುವ, ಬೆಳ್ಳಿ ಮತ್ತು ಚಿನ್ನಗಳಿಂದಲಂಕೃತವಾಗಿರುವ ಗೋವುಗಳೇ ಯಜ್ಞಸ್ಥಾನ ದಲ್ಲಿ ಈ ಮಹಾವಿರಾಗ್ನಿಗೆದುರಾಗಿ ಬಿಜಯಮಾಡಿ.

ಗಾವಃ ಶಬ್ದಕ್ಕೆ ವಾಚಃ ವಾಕ್ ಸ್ತುತಿ ಎಂದು ಗ್ರಹಿಸಿದರೆ - ಈ ಯಜ್ಞಪ್ರದೇಶದಲ್ಲಿ ಪಠಿಸುತ್ತಿರುವ ಭಗವಂತನಾದ ಇನ್ದ್ರನ ಸ್ತೋತ್ರರೂಪವಾದ ಸಾಮಗಾನಗಳನ್ನು ಎರಡೂ ಕಿವಿಗಳಿಂದ ಆಲಿಸುವ ಯಜಮಾನರೂ ಶ್ರೋತೃಗಳೂ ಧನ್ಯರಾಗುತ್ತಾರೆ ತೇಜಸ್ವಿಗಳಾಗುತ್ತಾರೆ.

ರಜತಕಾಂಚನಕರ್ಣಕುಂಡಲಾಲಂಕೃತನಿದೋ
ವರಮಹಾವೀರಾಗ್ನಿ; ಗೋವುಗಳ್! ಬನ್ನಿಮ್ ಇತ್ತಲ್ ।
ಯಜ್ಞಾರ್ಥಮೀವುದು ಸಮಂತ್ರಕಕ್ಷೀರ-ಘೃತಮಂ ॥

## ಋಕ್ - ೧೧೮

ಶ್ರುತಕಕ್ಷಃ ಆಂಗಿರಸಃ । ಗಾಯತ್ರೀನ್ದ್ರಃ ॥

೨ ೩ ೧ ೨ ೩ ೧ ೨ ೩ ೨ ೩ ೧ ೨
ಅರಮಶ್ವಾಯ ಗಾಯತ ಶ್ರುತಕಕ್ಷಾರಂ ಗವೇ ।

೨ ೩ ೧ ೨ ೩ ೧ ೨
ಅರಮಿನ್ದ್ರಸ್ಯ ಧಾಮ್ನೇ ॥ ೪.೧೧೮ ॥

೧ ೨ರ ೧ ೨ರ ೩ ೧ ೨ರ ೩ ೧ ೨ರ ೩ ೧ ೨ರ ೧
ಅರಮ್ - ಅಶ್ವಾಯ - ಗಾಯತ । ಶ್ರುತಕಕ್ಷ - ಶ್ರುತ - ಕಕ್ಷ - ಅರಮ್ - ಗ

೨ರ ೧ ೨ರ ೧ ೨ರ ೧ ೨ರ
ವೇ ॥ ಅರಮ್ - ಇನ್ದ್ರಸ್ಯ - ಧಾಮ್ನೇ ॥ ೪.೧೧೮ ॥

ಶ್ರೌತಕಕ್ಷೇ ದ್ವೇ । ದ್ವಯೋಃ ಶ್ರುತಕಕ್ಷೋ ಗಾಯತ್ರೀನ್ದ್ರಃ ॥

೩ ೨ ರ ೫ರ ೫ ೧ ೨
೧೧೮.೧. ಅರಾಽ೩ಳಮ್ । ಅಶ್ವಾಯ । ಗಾಯಾಽ೬ತಾ ॥ ಶ್ರೂತಕ ।

ರ ೧ ೨ ^ ೩ ೫ ೨ ೨
ಕ್ಷಾರಾಜ್ ಗಾವಾಇ । ಆಽ೨೩ಳರಾಮ್ । ಹಾಽ೩ಹಾಇ ॥

೧ ೨ ೧ ೨ ೨^ ೩
ಇ । ದ್ರಾಸ್ಯಾಽ೨೩ಧಾ ॥ ಹಿಂ ಮಾಯೇಽ೩. । ಮ್ನೋ । ಯಾ

೫೦ ೦ ೩ ೫
ಽ೨೩೪ಔಹೋವಾ ॥ ಈಽ೨೩೪ತೀ ॥

ದೀ - ೫ । ಪ - ೧೩ । ಮಾ - ೫ । ಋ । ೭ । ೧೮೮ ॥

೪೫೪ ೫೦ ೦ ೦ ೪ ೫ ೧ ೦ ೨
೧೧೮.೨. ಅರಮಶ್ವಾಯಗಾಯತಾ । ರಮಶ್ವೋವಾ ॥ ಯಾಗಾಯ

೧ ೨ ೧ ೨ ೨ ೧ ^
ತ । ಶ್ರುತಕ । ಕ್ಷಾಽ೨೩ । ಹಾಽ೩ಹಾಽ೩ಇ । ಆರಾಽ೨ಜ್

೩ ೫ ೧ ೨ ೨ ೨ ೧
ಗಾಽ೨೩೪ವಾಇ ॥ ಆರಮಿನ್ದ್ರಾಽ೩ । ಹಾಽ೩ಹಾ ॥ ಸ್ಯಾ

೨೦ ೧ ೨ ೪ ೫ ೪
ಧಾಮ್ನಾ । ಔಽ೩ಹೋವಾ । ಹೋಽ೫ಇ ॥ ಡಾ ॥

ದೀ - ೫ । ಪ - ೧೩ । ಮಾ - ೩ । ಬಿ । ೯ । ೧೮೯ ॥

ಶ್ರುತಕಕ್ಷ ಋಷಿರಾತ್ಮಾನಮೇವ ಸಂಬೋಧಯತಿ, ಹೇ **ಶ್ರುತಕಕ್ಷ** ಆತ್ಮನ್! **ಅರಮ್** ಅಲಂ **ಗಾಯತ** ವಚನ ವ್ಯತ್ಯಯಃ (೩.೧.೮೫) ಗಾಯ ಗೀತಿಂ ಕುರು । ಕಿಮರ್ಥಮಿನ್ದ್ರೋದ್ದೇಶೇನ ಸ್ತುತಿಸ್ತತ್ರಾಹ **ಅಶ್ವಾಯ** ಇನ್ದ್ರೇಣ ದೀಯಮಾನಾಯಾಶ್ವಾಯ ತದರ್ಥಮ್ **ಅರಮ್** ಅಲಂ ಗಾಯ ಇನ್ದ್ರ ವಿಷಯಂ ಸ್ತೋತ್ರಂ ಕುರು ತಥಾ **ಗವೇ** ಅಲಂ ಗಾಯ **ಇನ್ದ್ರಸ್ಯ** ಇನ್ದ್ರ ಕರ್ತೃಕಾಯ **ಧಾಮ್ನೇ** ಗೃಹಾಯ ತದರ್ಥಞ್ಚ **ಅರಮ್** ಪರ್ಯಾಪ್ತಮ್ ಸ್ತುಹಿ ಗೃಹಾದಿಕಮಿನ್ದ್ರಃ ಪ್ರಯಚ್ಛತಿ ತಸ್ಮೈ ಗಾಯೇತಿ ಯದ್ವಾ ಇನ್ದ್ರಸ್ಯೇತಿ ಕರ್ಮಣಿ ಷಷ್ಠೀ ಗವಾದಿ ಲಾಭಾರ್ಥಮಿನ್ದ್ರಂ ಸ್ತುಹಿ । **ಶ್ರುತಕಕ್ಷಾ ಶ್ರುತಕಕ್ಷಃ** ಇತಿ ಚ ಪಾಠೌ ॥

ಶ್ರುತಕಕ್ಷ ಎಂಬ ಹೆಸರಿನ ಋಷಿ, ವೇದವನ್ನು ಕಂಕುಳಲ್ಲಿಟ್ಟು ಕೊಂಡಿರುವ ಯಜ್ಞಕರ್ತೃ ವೇದಯಜ್ಞ ಋಷಿ, ವೇದಸಂಸ್ಕಾರ ಪಡೆದಿರುವ ಜೀವಾತ್ಮನೇ, **ಅರಮ್** ಸಾಕಷ್ಟು, **ಗಾಯತ** ಗಾನಮಾಡಿ, ಸ್ತೋತ್ರಮಾಡಿ, **ಅಶ್ವಾಯ** ಕುದುರೆಗಳಿಗಾಗಿ, **ಗವೇ** ಗೋವುಗಳಿಗಾಗಿ, **ಧಾಮ್ನೋ** ವಾಸಸ್ಥಾನ ಕ್ಕಾಗಿ, ಇನ್ದ್ರಸ್ಯ - ಇನ್ದ್ರನ.

ಶ್ರುತಕಕ್ಷನೆಂಬ ಋಷಿಯು, ಯಜ್ಞಕರ್ತೃವಾದ ಸ್ವಗತವಾಗಿ ತನ್ನ ವೇದ ಸಂಸ್ಕೃತವಾಗಿರುವ ಜೀವಾತ್ಮನನ್ನು ಉದ್ದೇಶಿಸಿ ಓಡಾಡಲು ಕುದುರೆಗಳನ್ನೂ ಯಜ್ಞದ ಹವಿರ್ದ್ರವ್ಯಗಳಿಗಾಗಿ ಹಸುಗಳನ್ನೂ ವಾಸಮಾಡಲು ಮನೆಗಳನ್ನೂ ದಯಪಾಲಿಸೆಂದು ಐಶ್ವರ್ಯವಂತನಾದ ಇನ್ದ್ರರೂಪೀ ಪರಮೇಶ್ವರನನ್ನು ಸಾಮಗಾನಗಳಿಂದ ಸ್ತುತಿಸಬೇಕೆಂದು ಕೇಳಿಕೊಳ್ಳುತ್ತಿದ್ದಾನೆ.

*ಶ್ರುತಕಕ್ಷಮುನಿ ತನಗೆ ತಾನೆ ನಿರ್ದೇಶವೀವಂ*
*ಎಲೆ ಜಿತಾತ್ಮನೆ! ವಾಜಿ–ಧೇನು–ಗೃಹಗಳ್ಗನುತ್ತುಂ*
*ಭಜಿಸಿಂದ್ರನಂ; ವೇದಸಂಸ್ಕಾರಪೂತನಯ್ ನೀಂ! ॥*

## ಋಕ್ - ೧೧೯

ಶ್ರುತಕಕ್ಷಃ ಆಂಗಿರಸಃ । ಗಾಯತ್ರೀನ್ದ್ರಃ ॥

**೧ ೨ರ ೩ ೨ ೩ ೨ ೩ ೧ ೨**
**ತಮಿನ್ದ್ರಂ ವಾಜಯಾಮಸಿ ಮಹೇ ವೃತ್ರಾಯ ಹನ್ತವೇ ।**

**೧ ೨ರ ೩ ೧ ೨**
**ಸ ವೃಷಾ ವೃಷಭೋ ಭುವತ್ ॥** *೫.೧೧೯ ॥*

೨ ೧ ೨ರ ೩ ೨ ೩ ೧ ೨ ೧ ೨ರ
ತಮ್ - ಇನ್ದ್ರಮ್ - ವಾಜಯಾಮಸಿ । ಮಹೇ - ವೃತ್ರಾಯ - ಹನ್ತವೇ ॥ ಸಃ

೧ ೨೦ ೩ ೨ ೩
- ವೃಷಾ - ವೃಷಭಃ - ಭುವತ್ ॥ *೫.೧೦೯* ॥

ತನ್ವಸ್ಯಸಾಮ । ತನ್ವಃ ಪಾರ್ಥೋವಾ ಗಾಯತ್ರೀನ್ದ್ರಃ ॥

೨೧ ೪೦ ೫೦ ೧ ೦ ೨ ೦
೧೧೯.೧. ತಮಿನ್ದ್ರಾಽ೨೩೦ವಾಜಯಾಮಸೀ ॥ ಮಾಹೇವೃತ್ರಾ ।

೧ ೨ — ೧ ೨ ೨
ಯಹಾನ್ತಾಽ೧ವೇಽ೨ ॥ ಸವಾಷಾಽ೧ವಾಽ೨೩ ॥ ಷ

೪ ೫ ೪ ॥ ೫
ಭೋಽ೨೩೪ವಾ ॥ ಭೂಽ೫ವೋಽ೬ಹಾಇ ॥

*ದೀ - ೪ । ಪ - ೬ । ಮಾ - ೧ । ತ । ೧೦ । ೧೯೦* ॥

ದಾವಸುನಿಧನಮ್ । ದಾವಸುರ್ಗಾಯತ್ರೀನ್ದ್ರಃ ॥

೨೧ ೪೦ ೦ ೫ ೧ ೦ ೨
೧೧೯.೨. ತಮಿನ್ದ್ರಾಽ೨೩೦ವಾಜಯಾಮಸಿಹಾಉ ॥ ಮಾಹೇವೃ

೦ ೧ ೨ ೧ ೨ ^ ೨
ತ್ರಾ । ಯಹಾನ್ತಾಽ೧ವೇಽ೨೩ । ಹೋವಾಽ೩ಹಾಇ ॥ ಸ

೧ ೨ ೧ ೨ ^ ೨ ೧
ವಾಷಾಽ೧ವಾಽ೨೩ । ಹೋವಾಽ೩ಹಾ ॥ ಷಭೋಽ೨

೧ ^ ೩ ೫೦ ೦ ೨ ೨೦ ೧ ೩
೩ । ಭೂಽ೨ವಾಽ೨೩೪ಔಹೋವಾ ॥ ಏಽ೩ । ದಾವಸೂಽ

೧೧೧
೨೩೪೫ ॥ *ದೀ - ೭ । ಪ - ೧೦ । ಮಾ - ೩ । ಞ । ೧೧ । ೧೯೧* ॥

ನಿವೇಷ್ಟ್ವಃ । ವಸಿಷ್ಠೋ ಗಾಯತ್ರೀನ್ದ್ರಃ ॥

೫ ೦ ೦ ೫ ೨ ೨
೧೧೯.೩. ತಮಿನ್ದ್ರಂವಾಜಯಾಮಸೀಽ೬ಏ ॥ ಮಹಾಽ೩ಹಾಇ ।

೦ ೧ ೮ — — — ನ ೨
ವೃತ್ರಾಽ೩ಯಾಹನ್ತವೇಽ೨ । ಓಽ೨ । ಈಽ೨ಈಽ೩ಯಾ ।

೧ ೨ ೨೦ ೧ — — — ನ
ಓಮೋವಾ ॥ ಸಹೇವಾರ್ಷಾಽ೨ । ಓಽ೨ । ಈಽ೨ಈಽ

೨ ೧. ೨ ೧. ^ ೩ ೫೦
೩ಯಾ । ಓಮೋವಾ ॥ ವೃಷ । ಭೋಽ೨ । ಯಾಽ೨೩೪ಔ

೦ ೩ ೫
ಹೋವಾ ॥ ಭೂಽ೨೩೪ವಾತ್ ॥

*ದೀ - ೬ । ಪ - ೧೪ । ಮಾ - ೪ । ಘೀ । ೧೨ । ೧೯೨ ॥*

ಇಡಾನಾಂ ಸಂಕ್ಷಾರಃ ॥ ಇಡಾಗಾಯತ್ರೀನ್ದ್ರಃ ॥

೨೦ ೦ ೧ ೨ ೪
೧೧೯.೪. ಔಹೋಇಹುವಾಽ೩ಹೋಇ । ತಮಿನ್ದ್ರಂವಾಽ೩ಜಾಽ೩

೨೦ ೩ ೫ ೨೦೦ ೧ ೨ ೦
ಯಾಮಸಿ ॥ ಔಹೋಇಹುವಾಽ೩ಹೋಇ । ಮಹೇವೃತ್ರಾ

೪ ೨೩೫೦ ೨೦ ೦ ೧
ಽ೩ಯಾಽ೩ಹನ್ತವೇ ॥ ಔಹೋಇಹುವಾಽ೩ಹೋಇ ।

೩ ೨^ ೩ ೫ ೨ ೧೦ ೨ ೧
ಸವಾರ್ಷಾಽ೨೩೪ವ್ಹಾ ॥ ಷಭೋಭುವತ್ । ಇಡಾಽ೨೩

೨ ೪ ೫ ೪
ಭಾಽ೩ । ಏಹೀಡಾ । ಹೋಽ೫ಇ ॥ ಡಾ ॥

*ದೀ - ೧೦ । ಪ - ೧೧ । ಮಾ - ೮ । ಪೈ । ೧೩ । ೧೯೩ ॥*

ಯಜಮಾನಾ ಆಹುಃ **ತಮ್** ಪೂರ್ವೋಕ್ತಲಕ್ಷಣಮ್ ಇನ್ದ್ರಮ್ **ವಾಜ ಯಾಮಸಿ** ಸೋಮೇನ ಸ್ತುತಿಭಿರ್ವಾಜಯಾಮಃ ವಾಜವನ್ತಂ ಕುರ್ಮಃ ಕಿಮರ್ಥಂ? **ಮಹೇ** ಮಹಾನ್ತಮ್ **ವೃತ್ರಾಯ** ಅಪಾವರಕಂ ವೃತ್ರಾಸುರಂ **ಹನ್ತವೇ** ಹನ್ತುಮ್ ಸೋಮಪಾನೇನ ಮತ್ತಃ ಸ್ತುತಿಭಿರ್ವಾ ಸ್ತುತಃ ಸನ್ ವೃತ್ರ ಹತ್ಯಾಯಾಂ ಚ ವಾಜಯಾಮಸಿ ವಾಜವನ್ತಂ ಕರೋತೀತ್ಯರ್ಥಃ ತತ್ಕರೋ ತೀತಿ ಣಿಚ್ ಣಾವಿಷ್ಠವತ್ ಇತಿ ಣೇರಿಷ್ಠವದ್ ಭಾವಾತ್ ಟೇಃ (೬.೪.೧೫೫) ಇತಿ ಟಿಲೋಪಃ ವಿನ್ಮತೋರ್ಲುಕ್ (೫.೩.೬೫) ಇತಿ ವಚನಾನ್ಮತುಪೋ ಲುಕ್ **ವೃಷಾ** ಧನಾನಾಂ ಸೇಕ್ತಾ ದಾತಾ **ಸಃ** ಇನ್ದ್ರಃ **ವೃಷಭಃ** ಅಸ್ಮಾಕಂ ಸ್ತೋತೄಣಾಂ ಸೋಮಸ್ಯ **ದಾತೄಣಾಂ** ಧನಾದಿಸೇಚಕೋ ದಾತಾ **ಭುವತ್** ಭವತು ||

**ಮಹೇ** ಬಹು ಹೆಚ್ಚಿನ, ಮಹತ್ತರವಾದ, **ವೃತ್ರಾಯ ಹನ್ತವೇ** ವೃತ್ರಾಸುರನನ್ನು ಕೊಲ್ಲುವ, ಮಹಾಪಾಪದ ಭಾವನೆಗಳನ್ನು ನಷ್ಟಮಾಡುವ, ಮಳೆಯನ್ನು ಸುರಿಸುವ, ಅಜ್ಞಾನ ನಾಶಕನಾದ, **ತಮ್ ಮಹೇ ಇನ್ದ್ರಮ್** ಆ ಮಹಾನುಭಾವನಾದ ಇನ್ದ್ರನನ್ನು, **ವಾಜಯಾಮಸಿ** ಪೂಜಿಸುತ್ತೇವೆ, ಪ್ರಶಂಸಿಸುತ್ತೇವೆ, **ವೃಷಾ** ಬಲಶಾಲಿಯಾದ, ಐಶ್ವರ್ಯಪ್ರದನಾದ, ಕಾಮನೆಗಳನ್ನು ಈಡೇರಿಸುವ, **ವೃಷಭಃ ಭವತು** ಐಶ್ವರ್ಯದ ಮಳೆಗರೆಯಲಿ.

ಬಹುಬಲಶಾಲಿಯಾದ ಮಹಾ ಪಾಪರೂಪೀ ವೃತ್ರಾಸುರನನ್ನು ಸಂಹರಿಸಲು ಶಕ್ತನಾದ, ಮಹಾನುಭಾವನಾದ, ನಾವು ಸ್ತುತಿಸಿ ಪ್ರಶಂಸಿಸುವ ಐಶ್ವರ್ಯಶಾಲಿಯಾದ ಇನ್ದ್ರನು ನಮ್ಮ ಕಾಮನೆಗಳನ್ನು ಈಡೇರಿಸಿ ಐಶ್ವರ್ಯದ ಮಳೆಯನ್ನು ಸುರಿಸಲಿ.

*ವೃತ್ರಸಂಹಾರನಂ, ಪಾಪಹರನಂ, ಜ್ಞಾನಿಯಂ*
*ಇಂದ್ರನಂ ಭಜಿಪೆವಾಂ, ಬಲಶಾಲಿಯಾತನೊಲ್ದು ।*
*ನಮ್ಮ ಬಯಕೆಗಳನಿತ್ತೈಸಿರಿಯ ಮಳೆ ಸುರಿಸುಗೆ ॥*

## ಋಕ್ - ೧೨೦

ದೇವಜಾಮಯಃ ಇನ್ದ್ರಮಾತರಃ ಋಷಿಕಾಃ । ಗಾಯತ್ರೀನ್ದ್ರಃ ॥

೧ ೨ ೩ ೨ ೩ ೨ ೩ ೧ ೨ ೩ ೧ ೨೦
ತ್ವಮಿನ್ದ್ರ ಬಲಾದಧಿ ಸಹಸೋ ಜಾತ ಓಜಸಃ ।

೧ ೨೦ ೩ ೧ ೨೦
ತ್ವꣳ ಸನ್ವೃಷನ್ವೃಷೇದಸಿ ॥ ೬.೧೨೦ ॥

೨ ೩ ೧ ೨೦ ೧ ೨೦ ೧ ೨೦ ೩ ೨ ೧ ೨೦
ತ್ವಮ್ - ಇನ್ದ್ರ - ಬಲಾತ್ - ಅಧಿ । ಸಹಸಃ - ಜಾತಃ - ಓಜಸಃ ॥ ತ್ವಮ್ -

೩ ೧ ೨೦ ೩
ಸನ್ - ವೃಷನ್ - ವೃಷಾ - ಇತ್ - ಅಸಿ ॥ ೬.೧೨೦ ॥

ಶಾಯ್ಯಾತಾನಿ ತ್ರೀಣಿ । ತ್ರಯಾಣಾಂ ಶಯ್ಯಾತಿರ್ಗಾಯತ್ರೀನ್ದ್ರಃ ॥

೩೦ ೨ ೧ ೨ ೨ ೧
೧೨೦.೧. ಹಾಉತ್ವಮಿನ್ದ್ರಾ ॥ ಬಲಾದಧಿ ॥ ಹಾऽಇಉಹಾಉ । ಸಹ

೨೦ ೦ ೧ ೨ ೨ ೨ ೨ ೧
ಸೋಜಾ । ತಾಓऽ೧ಜಸಾऽಇಃ । ಹಾऽಇಉಹಾಉ ॥ ತ್ವಾ

೨ ೨ ೨ ೧ ೨
ꣳ ಸನ್ವೃಷಾऽಇನ್ । ಹಾऽಇಉಹಾಉ ॥ ವೃಷಾಯೇऽ

೧ ^ ೩ ೫೦ ೦ ೨
ಇತ್ । ಆऽ೨ಸಾऽ೨ಇಳಔಹೋವಾ ॥ ವೃಧೇऽ೧ ॥

*ದೀ - ೫ । ಪ - ೧೧ । ಮಾ - ೧೨ । ಪಾ । ೧೪ । ೧೯೪ ॥*

೫ ೦ ೫ ೧ ೨೦ ೦ ೧ ೨ ೨^
೧೨೦.೨. ತ್ವಮಿನ್ದ್ರಬಲಾದಧೀऽಓಪ ॥ ಸಹಸೋಜಾ । ತಾಓऽ೧ಜಸಃ

೩ ೨ ೧ ೩ ೨^ ೩ ೫ ೧
ಇಯಾಽ೩ಹೋಇ । ಇಯಾಯೋಽ೨೩೪ವಾ ॥ ತ್ವಾꣳ

೨^ ೩ ೨ ೧ ೩ ೨^ ೩
ಸನ್ನೃಷನ್ । ಇಯಾಽ೩ಹೋಇ । ಇಯಾಯೋಽ೨೩೪

೫ ೨ ೧ ೨ ೧^ ೩ ೫೦ ೦
ವಾ ॥ ವೃಷಾಯೇಽ೩ತ್ । ಆಽ೨ಸಾಽ೨೩೪ಔಹೋ

೨
ವಾ ॥ ಮಹೇಽ೧ ॥

*ದೀ - ೫ । ಪ - ೧೧ । ಮಾ - ೮ । ಫೈ । ೧೫ । ೧೯೫ ॥*

೪ ೫ ೪ ೫೦ ೪ ೫ ೪ ೫ ೪ ೧ — ೧೦
೧೨೦.೩. ತ್ವಮಿನ್ದ್ರಬಲಾದಧಿಸಹಸಾಃ ॥ ಜಾತಾಽ೨ಃ । ಓಜಸಾಽ೨೩

೫೦ ೪ ೧ ೨ ೫೦
೪ಃ । ಇಹೋಇಹಾ ॥ ತ್ವಾꣳ ಸನ್ನೃಷಾಽ೩೪ನ್ । ಇಹೋ

೪ ೨ ೧ ೨ ೧ ^ ೩ ೫೦ ೦
ಇಹಾ ॥ ವೃಷಾಯೇಽ೩ತ್ । ಆಽ೨ಸಾಽ೨೩೪ಔಹೋ

೩ ೫
ವಾ ॥ ಈಽ೨೩೪ಹಾ ॥

*ದೀ - ೬ । ಪ - ೯ । ಮಾ - ೮ । ಫೈ । ೧೬ । ೧೯೬ ॥*

**ಹೇ ಇನ್ದ್ರ! ತ್ವಮ್ ಸಹಸಃ** ಪರೇಷಾಮಭಿ ಭಾವುಕಾದ್ **ಬಲಾತ್ ಅಧಿಜಾತಃ** ಅಸಿ, ಅಧಿಃ ಪಂಚಮ್ಯರ್ಥಾನುವಾದಕಃ ವೃತ್ರಾದಿ ವಧಹೇತು ಭೂತಾದ್ ಬಲಾದ್ಧೇತೋಸ್ತ್ವಂ ಪ್ರಖ್ಯಾತೋ ಭವಸಿ ಇತ್ಯರ್ಥಃ । ಅಪಿ ಚ **ಓಜಸಃ** ಓಜೋನಾಮ ಬಲಹೇತು ಹೃದಯಗತಂ ಧೈರ್ಯಂ ತಸ್ಮಾದಪಿ ತ್ವಂ

ಜಾತೋऽಸಿ ಹೇ ವೃಷನ್ ವರ್ಷಿತೇ ಸನ್ ಶ್ರೇಷ್ಠಃ ತ್ವಮ್ ವೃಷಾ ಇತ್ ಅಸಿ ಕಾಮಾನಾಂ ವರ್ಷಿತೈವ ಭವಸಿ ॥

ಇನ್ದ್ರ ಇನ್ದ್ರನೇ, ಬಲಾತ್ ಶಾರೀರಕ ಬಲದಿಂದಲೂ, ಸಹಸಃ ಸಾಹಸ ದಿಂದಲೂ, ಸಹಿಸುವ ಶಕ್ತಿಯಿಂದಲೂ, ಓಜಸಃ ಆಂತರಿಕ ಸಾಮರ್ಥ್ಯ ಹೃದ್ಗತ ಧೈರ್ಯಗಳ ಪ್ರಕಾಶದಿಂದಲೂ, ಮನೋಬಲದಿಂದಲೂ ಆತ್ಮಬಲ ದಿಂದಲೂ, ಅಧಿಜಾತಃ ಹುಟ್ಟಿನಿಂದಲೇ ಎಲ್ಲರಿಗಿಂತ ಶ್ರೇಷ್ಠನೂ ಪ್ರಸಿದ್ಧನೂ, ಅಸಿ ಆಗಿದ್ದೀಯೆ, ವೃಷಾ ಇತಿ, ಇಷ್ಟಾರ್ಥಗಳನ್ನು ಪೂರೈಸು.

ಶಾರೀರಕ ಬಲಸಾಹಸಗಳಿಂದಲೂ, ಆಂತರಿಕ ಧೈರ್ಯ ಸಾಮರ್ಥ್ಯ ಪ್ರಕಾಶಗಳಿಂದಲೂ ಮನೋಬಲ ಆತ್ಮಬಲದಿಂದಲೂ ಹುಟ್ಟಿನಿಂದಲೇ ಶ್ರೇಷ್ಠತೆಯನ್ನು ಪಡೆದು ಕಂಗೊಳಿಸುತ್ತಿರುವ ಇನ್ದ್ರನೇ ನಮ್ಮ ಸಮಸ್ತ ಇಷ್ಟಾರ್ಥಗಳನ್ನೂ ಈಡೇರಿಸು.

*ಬಲದಿಂದೆ ಬಲ್ಪಿನಿಂದೋಜೆಯಿಂ ತೇಜದಿಂದಂ*
*ಆತ್ಮಬಲದಿಂದೆ ವೀರ್ಯಸ್ಥೈರ್ಯಧೈರ್ಯದಿಂದಂ ।*
*ಪುಟ್ಟಿಂದೆ ಸರ್ವಮಾನಿತನಪ್ಪ ದೇವ! ಪೊರೆಯಯ್ ॥*

## ಋಕ್ - ೧೨೧

ಗೋಷೂಕ್ತ್ಯಶ್ವಸೂಕ್ತಿನೌ ಕಾಣ್ವಾಯನೌ ॥ ಗಾಯತ್ರೀನ್ದ್ರಃ ॥

೩ ೧ ೨೦ ೩ ೨ು ೩ ೧ ೨
ಯಜ್ಞ ಇನ್ದ್ರಮವರ್ದ್ಧಯದ್ಯದ್ಭೂಮಿಂ ವ್ಯವರ್ತಯತ್ ।

೩ ೧ ೨ ೩ ೨ ೩ ೨
ಚಕ್ರಾಣ ಓಪಶಂ ದಿವಿ ॥ ೭.೧೨೧ ॥

೩ ೨ ೧ ೨೦ ೩ ೨ ೧ ೨೦ ೧ ೨೦
ಯಜ್ಞಃ - ಇನ್ದ್ರಮ್ - ಅವರ್ದ್ಧಯತ್ । ಯತ್ - ಭೂಮಿಮ್ - ವ್ಯವರ್ತ

೩ ೧ ೨೦ ೩ ೨ ೩ ೨ ೩ ೨
ಯತ್ - ವಿ - ಅವರ್ತಯತ್ ॥ ಚಕ್ರಾಣಃ - ಓಪಶಮ್ - ಓಪ - ಶಮ್ -

೩ ೨
ದಿವಿ ॥

ಇನ್ದ್ರಾಣ್ಯಾಃ ಸಾಮ । ಇನ್ದ್ರಾಣೀ ಗಾಯತ್ರೀನ್ದ್ರಃ ॥

೫ ೫ ೨ ೧೧
೧೨೧.೧. ಯಜ್ಞಇನ್ದ್ರಮವರ್ದ್ಧಾ೨ಽಯಾತ್ ॥ ಯದ್ಭೂಮಿಮ್ ।

ಅ ^ ೩ ೫ ೩ ೫
ವ್ಯಾ । ವ್ಯವಾಽ೨ಿತ್ತಾ೨ಽ೨೩೪ಯಾತ್ । ಚಾಽ೨೩೪ಕ್ರಾ ।

೩ ೫ ೧ ೨ ೧ ೨೩೦ ೨೧ ೧ ^
ಣಾಽ೨೩೪ಓ । ಪಾಶನ್ದಿವಿ ॥ ಚಕ್ರಾಣಓಽ೨೩ ॥ ಪಾಽ೨

೩ ೫೦ ೦ ೩ ೫
ಶಾಽ೨೩೪ಔಹೋವಾ ॥ ದೀಽ೨೩೪ವೀ ॥

*ದೀ - ೪ । ಪ - ೧೦ । ಮಾ - ೭ । ನೇ । ೧೭ । ೧೯೭ ॥*

**ಯಜ್ಞಃ** ಯಜಮಾನೈಃ ಅನುಷ್ಠೀಯಾಮಾನೋ ಯಾಗಃ **ಇನ್ದ್ರಮ್** ದೇವಮ್ **ಅವರ್ದ್ಧಯತ್** ಶ್ರೂಯತೇ ಹಿ ಇನ್ದ್ರ ಇದಂ ಹವಿರಜುಷತಾ ವೀವೃಧತ ಮಹೋಜ್ಯಾಯೋ ಕೃತಃ ಇತಿ ಸ ಇನ್ದ್ರಃ **ಯತ್** ಯಸ್ಮಾತ್ **ಭೂಮಿಮ್** ಪೃಥಿವೀಂ (ನಿ.೧.೧.೧೯) **ವ್ಯವರ್ತಯತ್** ವೃಷ್ಟ್ಯಾದಿ ಪ್ರದಾನೇನ ವಿಶೇಷೇಣ ವರ್ತ್ತಮಾನಾಮಕರೋತ್ । ಕಿಂ ಕುರ್ವನ್? **ದಿವಿ** ಅನ್ತರಿಕ್ಷೇ

ಮೇಘಮ್ **ಓಪಶಮ್** ಉಪೇತ್ಯ ಶಯಾನಂ **ಚಕ್ರಾಣಃ** ಕುರ್ವನ್ ಯದ್ವಾ ಆತ್ಮನಿ ಸಮವೇತೋ ವೀರ್ಯವಿಶೇಷಃ ಓಪಶಃ ತಮನ್ತರಿಕ್ಷೇ ಕುರ್ವನ್ ॥

**ಯಜ್ಞಃ** - ಇನ್ದ್ರಭಗವಂತನು ಯಜ್ಞದ ಆಹುತಿಗಳಿಂದ, **ಆವರ್ಧಯತ್** - ವೃದ್ಧಿಗೊಂಡು, ಕೀರ್ತಿಯಿಂದ ಬೆಳಗಿದ, **ಇನ್ದ್ರಮ್** - ಇನ್ದ್ರನನ್ನು, ಸೂರ್ಯನನ್ನು, ದಿವಿ - ಅನ್ತರಿಕ್ಷದಲ್ಲಿ, ಆಕಾಶದಲ್ಲಿ, **ಓಪಶಮ್** - ಹರಡುತ್ತಾ, ತೂಗಾಡುತ್ತಾ, **ಭೂಮಿಮ್** - ಭೂಮಿಯನ್ನು, **ಚಕ್ರಾಣಃ** - ತಿರುಗುವಂತೆ, ಮಾಡಿದನು, **ವ್ಯವರ್ತಯತ್** - ನೆಲೆಗೊಳಿಸಿದನು, ವ್ಯವಸ್ಥೆ ಮಾಡಿದನು.

ಯಜ್ಞದಲ್ಲಿ ಅರ್ಪಿಸಿದ ಆಹುತಿಗಳಿಂದ ವೃದ್ಧಿಹೊಂದಿ ಬೆಳಗಿದ ಇನ್ದ್ರನು ಅಂತರಿಕ್ಷದಲ್ಲಿ ಮೇಘಗಳು ಹರಡಿ ಮಳೆ ಸುರಿಸುವಂತೆ ಮಾಡಿ ಭೂಮಿಯನ್ನೆಲ್ಲಾ ಆವರಿಸಿರುವ ಜೀವಕೋಟಿಗಳು ನೆಮ್ಮದಿಯಾಗಿ ನೆಲಸಿರುವಂತೆ ವ್ಯವಸ್ಥೆ ಗೊಳಿಸಿದ. ಭಗವಂತನು ಅನ್ತರಿಕ್ಷದಲ್ಲಿ ಸೂರ್ಯನನ್ನು ಬೆಳಗಿಸುತ್ತಾ ಭೂಮಿಯು ಅವನ ಸುತ್ತಲೂ ಸುತ್ತುವಂತೆ ವ್ಯವಸ್ಥೆಗೊಳಿಸಿ, ಈ ಸೂರ್ಯ ಮತ್ತು ಭೂಮಿಯ ಸಂಬಂಧದಿಂದ ಜೀವ ಜಗತ್ತು ವೃದ್ಧಿಸಿ ನೆಮ್ಮದಿಯಿಂದಿರುವಂತೆ ನೆಲೆಗೊಳಿಸಿದ. ಇನ್ದ್ರನು ಅಂತರಿಕ್ಷದಲ್ಲಿ ಮೇಘವು ಹರಡುವಂತೆ ಮಾಡಿ ವೃಷ್ಟಿಯಿಂದ ಪೃಥ್ವಿಯನ್ನು ತೋಯಿಸಿದುದರಿಂದಲೇ ಯಜ್ಞವು ಇನ್ದ್ರನನ್ನು ಬೆಳೆಯುವಂತೆ ಮಾಡಿತು.

*ಯಜ್ಞಸ್ವರೂಪಿ ದೇವೇಂದ್ರನಾಹುತಿಗಳಿಂದಂ*
*ಬಾನಿನೊಳ್ ಬೆಳಕೀವ ಭಾನುವಂ ತೂಗಿಸಿದನು ।*
*ಚಕ್ರದಂದದೆ ಸುಳಿವ ಭೂಮಿಯಂ ಸ್ಥಾಪಿಸಿದನು ॥*

## ಋಕ್ - ೧೨೨

ಗೌಷೂಕ್ತ್ಯಶ್ವಸೂಕ್ತಿನೌ ಕಾಣ್ವಾಯನೌ ॥ ಗಾಯತ್ರೀನ್ದ್ರಃ ॥

೧ ೨ ೩ ೨u ೩ ೧ ೨೦ ೩ ೨ ೩ ೨ ೩ ೨
ಯದಿನ್ದ್ರಾಹಂ ಯಥಾ ತ್ವಮೀಶೀಯ ವಸ್ವ ಏಕ ಇತ್ ।

೩ ೨ ೩ ೧ ೨
ಸ್ತೋತಾ ಮೇ ಗೋಸಖಾ ಸ್ಯಾತ್ ॥ ೮.೧೨೨ ॥

೨ ೩ ೨ ೧ ೨೦ ೧ ೨೦ ೧ ೨೦ ೧ ೨೦
ಯತ್ - ಇನ್ದ್ರ - ಅಹಮ್ - ಯಥಾ - ತ್ವಮ್ ॥ ಈಶೀಯ - ವಸ್ವಃ - ಏಕಃ

೩ ೨ ೩ ೧ ೨೦ ೩
- ಇತ್ । ಸ್ತೋತಾ - ಮೇ - ಗೋಸಖಾ - ಗೋ - ಸಖಾ - ಸ್ಯಾತ್ ॥ ೮.೧೨೨

ಗೌಷೂಕ್ತಮ್ । ಗೌಷೂಕ್ತಿರ್ಗಾಯತ್ರೀನ್ದ್ರಃ ॥

೪ ೫೦ ೪ ೫೦ ೪೦ ೫ ೪
೧೨೨.೧. ಯದಿನ್ದ್ರಾಹಂಯಥೌ । ಹೌಹೋವಾಹಾಇ । ತುವಾ

೨೦ ೧೦ ೨ ೧ ೨
ಮ್ ॥ ಈಶೀಯವಸ್ವಔಽ೨ । ಹುವಾಇ । ಹುವಾಯೇ ।

೧ ೦ ೧೦ ೦ ೦ ೨ ೧
ಕಾಈಽ೨ತ್ ॥ ಸ್ತೋತಾಮೇಗೋಸಖೌಽ೨ । ಹುವಾಇ ।

೨ ೧ ೧ ^ ೩ ೫೦
ಹುವಾಯೇ ॥ ಸಾಯಾಽ೨೩ತ್ । ಹೋಽ೨ವಾಽ೨೩೪ಔ

೦ ೨೧ ೦ ೨ ೩ ೧೧೧
ಹೋವಾ ॥ ಅಗ್ನಿರಾಹುತಾಽ೨೩೪೫ಃ ॥

*ದೀ - ೧೨ । ಪ - ೧೩ । ಮಾ - ೧೦ । ಔ । ೧೮ । ೧೯೮ ॥*

ಆಶ್ವಸೂಕ್ತಮ್ ॥ ಆಶ್ವಸೂಕ್ತಿರ್ಗಾಯತ್ರೀನ್ದ್ರಃ ॥

೨^ ೩೦ ೪ ೫ ೦ ೨ ೧
೧೨೨.೨. ಆಔಹೋವಾಹಾಇ । ಯದಿನ್ದ್ರಾಹಾಮ್ ॥ ಯಥಾ ।

೨೦ ೦ ೩೦ ೨ ೦ ೨ ೧
ತ್ವಮ್ । ಐಹೀಯೈಹೀಽ೧ । ಆಇಶೀಯವಸ್ವಆಇಕಇತ್ ।

೨೦ ೦ ೩೦ ೨ __ ೧ __ ೧
ಐಹೀಯೈಹೀಽ೧ ॥ ಆಽ೨ಇ । ಸ್ತೋತಾಽ೨ಮಾಇಗೋ

__ ೧ ೧. ^ ೩ ೫೦ ೦ ೨ ೧
ಽ೨ ॥ ಸಖಾಽ೨೩ । ಸಾಽ೨ಯಾಽ೨೩೪ಔಹೋವಾ ॥ ಶುಕ್ರ

೦ ೨^ ೩ ೧೧೧
ಆಹುತಾಽ೨೩೪೫ಃ ॥

*ದೀ - ೧೨ । ಪ - ೧೨ । ಮಾ - ೧೪ । ಛೀ । ೧೯ । ೧೯೯ ॥*

ಹೇ **ಇನ್ದ್ರ! ಯಥಾ ತ್ವಮ್ ಏಕ ಇತ್** ಏಕ ಏವ ಕೇವಲಃ **ವಸ್ವಃ** ವಸುನಃ ಧನಸ್ಯ ಈಶಿಷೇ ಏವಮ್ **ಅಹಮ್** ಅಪಿ **ಯದ್** ಯದಿ **ಈಶೀಯ** ಐಶ್ವರ್ಯ ಯುಕ್ತಃ ಸ್ಯಾಮ್ । ತದಾನೀಂ **ಮೇ** ಮಮ **ಸ್ತೋತಾ ಗೋಸಖಾ ಸ್ಯಾತ್** ಗೋಭಿಃ ಸಹಿತೋ ಭವೇತ್ ಈಶ್ವರಸ್ಯ ತವಸ್ತೋತಾ ಕುತೋ ಹೇ ತೋ ಗೋರ್ಗೋ ಸಹಿತೋ ನ ಭವೇತ್? ಅಪಿತುಭವೇ ದೇವೇತ್ಯಭಿಪ್ರಾಯಃ ॥

ಇನ್ದ್ರ ಇನ್ದ್ರನೇ ಭಗವಂತನೇ, **ಯಥಾ** ಯಾವರೀತಿ, **ಏಕಇತ್** ಏಕಾಕಿಯಾದ ಒಬ್ಬನೇ, **ವಸ್ವಃ** ಸಮಸ್ತ ಐಶ್ವರ್ಯಗಳಿಗೂ, **ಈಶೀಯಃ** ಅಧಿಪತಿ ಯಾಗಿರುವಂತೆ, **ಅಹಮ್** ನಾನೂ ಸಹ, **ಯತ್ ವಸ್ವಃ** ಆ ಐಶ್ವರ್ಯಗಳಿಗೆ ಒಡೆಯನಾದಾಗ, **ಮೇ ಸ್ತೋತಾ** ನನ್ನ ಈ ಯಜ್ಞದ ಋತ್ವಿ ಜರೂ, ಸ್ತೋತ್ರಗಳೂ, **ಗೋಸಖಾಸ್ಯಾತ್** ಗೋ ಭೂಮಿ ಆದಿ ಧನಗಳ ಮಿತ್ರರಾಗಲಿ.

ಭಗವಂತನಾದ ಇನ್ದ್ರನೇ ನೀನು ಸಮಸ್ತ ಐಶ್ವರ್ಯಗಳಿಗೂ ಅದ್ವಿತೀಯ ಪ್ರಭುವಾಗಿರುವಂತೆಯೇ ನಾನೂ ಸಹ ಆ ಸಮಸ್ತ ಐಶ್ವರ್ಯಗಳಿಗೂ ಒಡೆಯನಾಗಿ ನನ್ನ ಈ ಯಜ್ಞಾನುಷ್ಠಾನದಲ್ಲಿ ಭಾಗವಹಿಸಿರುವ ಋತ್ವಿಜರೂ ಗೋ ಭೂ ಹಿರಣ್ಯಾದಿಗಳಿಂದ ಸಮೃದ್ಧರಾಗಲಿ.

ಪರಮಾತ್ಮನ ಉಪಾಸನಾನಿರತನಾದವನು ಭಗವಂತನನ್ನು ಸ್ತುತಿಸಿ ಅವನ ಆನನ್ದಾದಿ ಐಶ್ವರ್ಯಗಳ ಭಾಗಿಯಾಗಿ ಜೀವನ್ಮುಕ್ತನಾಗಿರುವನನ್ನು ನೋಡಿ ಅವನ ಇಷ್ಟಮಿತ್ರರೂ ಅವನನ್ನು ಅನುಕರಿಸುತ್ತಾರೆ.

ಇಂದ್ರಭಗವಂತನೆ! ಅದೆಂತು ನೀನೊರ್ವನೆಲ್ಲ
ಸಂಪದಗಳೊಡೆಯನೋ ಅಂತು ನಾನಾಗಲಾಗಳ್ ।
ನನ್ನೆಲ್ಲ ಋತ್ವಿಜರು ಗೋಧನಸಮೃದ್ಧರಪ್ಪರ್ ॥

## ಋಕ್ - ೧೨೩

ಮೇಧಾತಿಥಿಃ ಕಾಣ್ವಃ ಪ್ರಿಯಮೇಧಶ್ಚಾಂಗಿರಸಃ । ಗಾಯತ್ರೀನ್ದ್ರಃ ॥

೧ ೨ ೩ ೧ ೨ ೩ ೧ ೨ ೩ ೧ ೨
**ಪನ್ಯಂಪನ್ಯಮಿತ್ಸೋತಾರ ಆ ಧಾವತ ಮದ್ಯಾಯ ।**

೧ ೨ ೩ ೨ ೩ ೧ ೨
**ಸೋಮಂ ವೀರಾಯ ಶೂರಾಯ ॥ ೯.೧೨೩ ॥**

೧ ೨ರ ೧ ೨ರ ೩ ೨ ೩ ೨
ಪನ್ಯಂ - ಪನ್ಯಂ - ಪನ್ಯಂ - ಪನ್ಯಂ - ಇತ್ - ಸೋತಾರಃ । ಆ -

೩ ೧ ೨ರ ೧ ೨ರ ೩ ೧ ೨ ೧ ೨ರ
ಧಾವತ - ಮದ್ಯಾಯ ॥ ಸೋಮಮ್ - ವೀರಾಯ - ಶೂರಾಯ ॥

ಗೌರೀವಿತಮ್ । ಗೌರೀವಿತಿರ್ಗಾಯತ್ರೀನ್ದ್ರಃ ॥

೪ ೫ ೪ ೫೦ ೫ ೧ ೨
೧೨೩.೧. ಪನ್ಯಂಪನ್ಯಮಿತ್ । ಸೋತಾಽ೬ರಾಃ ॥ ಪನ್ಯಂಪನ್ಯಮಿತ್ಸೋ

೨ ೨ ೧ ೨೦ ೩ ೨ ೩ ೪ ೫ ೧
ಽ೧ತಾಽ೩ರಾಃ । ಆ । ಧಾವತ ॥ ಮದಿಯಾಯಾ ॥ ಸೋಮಂ

೨೦ ೧ ೨ ೪
ವೀ । ರಾಽ೨೩ ॥ ಯಶೂಽ೩ರಾಽ೫ಯಾಽ೬೫೬ ॥

*ದೀ - ೩ । ಪ - ೯ । ಮಾ - ೩ । ಥ । ೨೦ । ೨೦೦ ॥*

ಹೇ **ಸೋತಾರಃ** ಅಭಿಷೋತಾರೋಽಧ್ವರ್ಯವಃ । **ಮದ್ಯಾಯ** ಮಾದಯಿತವ್ಯಾಯ **ವೀರಾಯ** ವಿಕ್ರಾನ್ತಾಯ **ಶೂರಾಯ** ಶೌರ್ಯವತೇ ಇನ್ದ್ರಾಯ **ಪನ್ಯಮ್ ಪನ್ಯಮ್ ಇತ್** ಸರ್ವತ್ರ ಸ್ತುತ್ಯಮೇವ **ಸೋಮಮ್ ಆ ಧಾವತ** ಅಭಿಗಮಯತ ಪ್ರಯಚ್ಛತೇತ್ಯರ್ಥಃ ॥

**ಸೋತಾರಃ** ಸೋಮಯಜ್ಞಾನುಷ್ಠಾತೃಗಳೇ, ಸೋಮವೆಂಬ ಓಷಧಿಯನ್ನು ಹಿಂಡಿ ರಸ ತೆಗೆಯುವವರೇ, **ಮದ್ಯಾಯ** ಸಂತೋಷಕ್ಕೆ, ಆನನ್ದಕ್ಕೆ, **ಶೂರಾಯ** ಶೌರ್ಯಕ್ಕೆ, **ವೀರಾಯ** ಪರಾಕ್ರಮಕ್ಕೆ, **ಪನ್ಯಂಪನ್ಯಂ** ಸಮಸ್ತರ ಅತ್ಯಂತ ಪ್ರಶಂಸೆಗೆ ಪಾತ್ರನಾದ ಇನ್ದ್ರನಿಗೆ, **ಸೋಮಮ್** ಸೋಮರಸವನ್ನು, **ಆಧಾವತ** ಅರ್ಪಿಸಿರಿ.

ಸಂತೋಷಕ್ಕೂ ಆನಂದಕ್ಕೂ ಶೌರ್ಯಕ್ಕೂ ಪರಾಕ್ರಮಕ್ಕೂ ಸಮಸ್ತರ ಪ್ರಶಂಸೆಗಳಿಗೂ ಪಾತ್ರನಾದ ಇನ್ದ್ರನಿಗೆ ಸೋಮಯಜ್ಞಾನುಷ್ಠಾನ ನಿರತರೇ ಸೋಮರಸವನ್ನು ಅರ್ಪಿಸಿ.

ಸೋಮಯಾಜಿಗಳೆ! ನೀವ್ ಪಡೆಯಲ್ಕೆ ಹರ್ಷ–ವೀರ್ಯ–
–ಕ್ಷೇಮ–ಶೌರ್ಯ–ಪ್ರತಾಪರ್ಧಿ ಸೌಭಾಗ್ಯಮೆಲ್ಲಂ ।
ಇಂತಪ್ಪ ಗುಣಿಸನ್ನುತೇಂದ್ರಗೀವ್ರುದು ಸೋಮಮಂ ॥

## ಋಕ್ - ೧೨೪

ಮೇಧಾತಿಥಿಕಾಣ್ವಃ ಪ್ರಿಯಮೇಧಶ್ಚಾಂಗಿರಸಃ । ಗಾಯತ್ರೀನ್ದ್ರಃ ॥

೩ ೧ ೨ ೩ ೨ u ೩ ೨ ೩ ೧ ೨ ೩ ೧ ೨
ಇದಂ ವಸೋ ಸುತಮನ್ಧಃ ಪಿಬಾ ಸುಪೂರ್ಣಮುದರಮ್ ।

೧ ೨ ೩ ೧ ೨
ಅನಾಭಯಿನ್ರರಿಮಾತೇ ॥ ೧೦.೧೨೪ ॥

ಸ್ವ - ೧೦ । ಉ - ೪ । ಧಾ - ೪೬ । ಭೂ । ದ - ೩ ।

೩ ೨ ೩ ೨ ೧ ೨ ೧ ೨೦ ೧ ೨೦
ಇದಂ - ವಸೋ - ಸುತಂ - ಅನ್ಧಃ । ಪಿಬ - ಸುಪೂರ್ಣಂ - ಸು -

೩ ೧ ೨ ೩ ೧ ೨೦ ೧ ೨೦
ಪೂರ್ಣಂ - ಉದರಂ - ಉ - ದರಮ್ ॥ ಅನಾಭಯಿನ್ - ಅನ್ -

೩ ೨ ೩
ಆಭಯಿನ್ - ರರಿಮ - ತೇ ॥ ೧೦ ॥

ಆ - ೪೬ । ಅ - ೧೧ । ಪ - ೧೨೮ । ಕೈ । ದ - ೩ ॥

ಇತಿ ತೃತೀಯಾದಶತಿಃ ॥ ೩ ॥ ಇತಿ ಪ್ರಥಮಃ ಖಣ್ಡಃ ॥ ೧ ॥

ಗಾರಾಣಿತ್ರೀಣಿ । ತ್ರಯಾಣಾಂ ಗರೋ ಗಾಯತ್ರೀನ್ದ್ರಃ ॥

೫ ೨ ೧ ೨ ೧ ೨೦ ೦
೧೨೪.೧. ಇದಂವಸಾಉ ॥ ಸುತಮಾ೭೨೩ನ್ಧಾಃ । ಪಿಬಾ೭೨ಸುಪೂ । ಣ

೧ ೨ ೩ ೨ ೩ ೨
ಮುದಾಽ೨೩ರಾಽ೩ಳಮ್ ॥ ಅನಾಽ೩ಳಭಯಾಽ೩ಇ

೪ ೫ ೪ ॥ ೫
ನ್ ॥ ರರೋ೩ವಾ ॥ ಮಾಽ೫ತೋ೩ಽ೬ಹಾಇ ॥

*ದೀ - ೨ / ಪ - ೭ / ಮಾ - ೬ / ಘೂ / ೨೧ / ೨೦೧ ॥*

೫ ೪ ೨ ೩೦ ೪ ೫ ೨ ೧೦ ೨
೧೨೪.೨. ಇದಾಽ೩೦ವಸೋ೩ಸುತಮನ್ಧಾಃ ॥ ಪಿಬಾಸೂಽ೨೩ಪೂಽ

೧ ^ ೩ ೫ ೧ ೨
೩ । ಣಮೂಽ೨ದಾಽ೨೩ಳರಾಮ್ ॥ ಆಽ೨೩ನಾ ॥ ಭಾ

__ ೧ ೮ ೨ ೧೦ ೩
ಽ೨ಯಾಇನ್ । ರರಾಽ೨೩ । ಹಾಉವಾಽ೩ ॥ ಮಾತೇ೩ಽ೨

೧೧೧
೩ಳ೫ ॥ *ದೀ - ೩ / ಪ - ೮ / ಮಾ - ೫ / ಡು / ೨೨ / ೨೦೨ ॥*

೫ ೦ ೫ ೨೦ ೦ ೧
೧೨೪.೩. ಇದಂವಸೋ೩ಸುತಮನ್ಧಾಽ೬ಏ ॥ ಪಿಬಾಸುಪೂಽ೩ರ್ಣಾ

೮ ೨೦ ೨ ೧೦ ೦ ೮
ಮುದರೌ । ಹೋ೩ಽ೩ವಾ । ಪಿಬಾಸುಪೂರ್ಣಾಮುದ

೨೦ ೨ ೧ ೨ ೨ ೧೨೦ ೧
ರೌ । ಹೋ೩ಽ೩ವಾ ॥ ಆನಾಭಾಽ೩ಯೀ೩ನ್ ॥ ರರಿಮಾತಾ ।

೨ ೪ ೫ ೪
ಔಽ೩ಹೋ೩ವಾ । ಹೋ೩ಽ೫ಇ ॥ ಡಾ ॥

*ದೀ - ೮ / ಪ - ೧೦ / ಮಾ - ೩ / ಣ / ೨೩ / ೨೦೩ ॥*

*ತ್ರಯೋ೩ವಿಂಶತಿಃ ಪ್ರಥಮಃ ಖಣ್ಡಃ ॥ ೧ ॥ ಪ್ರಥಮಾ ದಶತಿಃ ॥ ೧ ॥*

ಹೇ **ವಸೋ** ವಾಸಯಿತಃ! ಇನ್ದ್ರ! **ಇದಮ್** ಪುರೋವರ್ತಮಾನಂ **ಸುತ ಮ್** ಅಭಿಷುತಮ್ **ಅಂಧಃ** ಅನ್ನಮ್ ಸೋಮ ಲಕ್ಷಣಂ, **ಪಿಬಾ** ಯಥಾ **ಉದರಮ್** ತ್ವದೀಯಂ ಜಠರಂ **ಸುಪೂರ್ಣಮ್** ಅತಿಶಯೇನ ಸಂಪೂರ್ಣಂ ಭವತಿ ತಥೇತ್ಯರ್ಥಃ । ಹೇ **ಅನಾಭಯಿನ್** ಆ ಸಮನ್ತಾತ್ ಬಿಭಿತ್ಯಾ ಭಯೀ ಬಿಭೇತೇರೌಣಾದಿಕ ಇನಿಃ ನ ಆಭಯೀ ಅನಾಭಯೀ ತಾದೃಶ! ಹೇ ಇನ್ದ್ರ! **ತೇ** ತುಭ್ಯಂ ತ್ವದರ್ಥಂ **ರರಿಮಾ** ಉಕ್ತಗುಣ ಸೋಮಂ ದದ್ಮಃ । ರಾ ದಾನೇ ಛಂದಸೋಲಿಟ್ ॥

**ವಸೋ** ಎಲ್ಲವನ್ನೂ ಆವರಿಸಿರುವ, ಸರ್ವಾನ್ತರ್ಯಾಮಿಯಾದ, **ಅನಾಭಿಯಾನ್** ನಿರ್ಭಯನಾದ ಇನ್ದ್ರನೇ, **ಇದಂ ಸುತಂ ಅನ್ಧಃ** ಈ ಸೋಮ ರೂಪೀ ಹವಿಸ್ಸನ್ನು, **ತೇ ರರಿಮಾ** ನಿನಗೆ ಸಂತೋಷ ಆನಂದಗಳನ್ನುಂಟು ಮಾಡಲೆಂದು ಅರ್ಪಿಸಿರುವ, **ಸುಪೂರ್ಣಮುದರಮ್** ಸಂಪೂರ್ಣವಾಗಿ ತೃಪ್ತಿಯಾಗುವಂತೆ, ಪಿಬ - ಸೇವಿಸು.

ಸರ್ವಾನ್ತರ್ಯಾಮಿಯಾಗಿ ಎಲ್ಲವನ್ನೂ ಆವರಿಸಿರುವ ನಿರ್ಭಯನಾದ ಇನ್ದ್ರಭಗವಂತನೇ ನಿನಗೆ ಸಂತೋಷ ಆನಂದಗಳನ್ನುಂಟು ಮಾಡಲು ಅರ್ಪಿಸಿರುವ ಈ ಸೋಮರೂಪೀ ಹವಿಸ್ಸನ್ನು ಪರಿಪೂರ್ಣವಾಗಿ ತೃಪ್ತಿ ಯಾಗುವವರೆಗೂ ಸೇವಿಸು.

*ಎಲ್ಲೆಡೆಯುಮಿರ್ಪ ನಿರ್ಭೀತನೆ! ಪುರಂದರನೆ! ಕೊಳ್*
*ಸೋಮರೂಪಾಹುತಿಯಿದೋ! ತುಷ್ಟಿಗೆಂದರ್ಪಿತಂ ।*
*ದಯೆದಿಂದಿದಂ ತೃಪ್ತಿಯಪ್ಪಂತೆ ಸೇವಿಪುದು ನೀಂ ॥*

## ಋಕ್ - ೧೨೫

ಸುಕಕ್ಷಶ್ರುತಕಕ್ಷೌ । ಗಾಯತ್ರೀನ್ದ್ರಃ ॥

೨u ೩ ೨ ೩ ೧ ೨ ೩ ೧ ೨೧
ಉದ್ಘೇದಭಿ ಶ್ರುತಾಮಘಂ ವೃಷಭಂನರ್ಯಾಪಸಮ್ ।

೧ ೨
ಅಸ್ತಾರಮೇಷಿ ಸೂರ್ಯ ॥ *೧.೧೨೫* ॥

೨ ೩ ೨ ೩ ೨ ೩ ೧ ೨ ೩ ೨ ೩
ಉತ್ - ಘ - ಇತ್ - ಅಭಿ - ಶ್ರುತಾಮಘಮ್ - ಶ್ರುತ - ಮಘಮ್ । ವೃಷ

೨ ೧ ೨೧ ೧ ೨೧ ೩ ೧ ೨೧ ೩
ಭಮ್ - ನರ್ಯಾಪಸಮ್ - ನರ್ಯ - ಅಪಸಮ್ । ಆಸ್ತಾರಂ - ಏಷಿ -

ಸೂರ್ಯ ॥ *೧.೧೨೫* ॥

ಐಡಸೌಪರ್ಣಂ ಶರುಪ್ರವೇತಸಂ ವಾ । ತ್ರಯಾಣಾಂ ಸುಪರ್ಣೋ
ಗಾಯತ್ರೀನ್ದ್ರಃ ಸೂರ್ಯಃ ॥

೫ ೦ ೪ ೫ ೧ ೨^ ೩ ೫ ೨
*೧೨೫.೧.* ಉದ್ಘೇದಭ್ಯೋವಾ ॥ ಶ್ರೂತಾಮಾऽ೨೩೪ಘಾಮ್ । ವೃ

೧ ೨ ೧ ೭ ^ ೩ ೫ ೧
ಷಾಭನ್ನಾ । ರಿಯಾऽ೨ಪಾऽ೨೩೪ಸಾಮ್ ॥ ಆऽ೨ಸ್ತಾ ।

೨ ೧ ೨೧ ೧ ೨ ೪ ೫
ರಾऽ೨೩ಮೇ ॥ ಷಾಇಸೂರಿಯಾ । ಔऽ೩ಹೋವಾ ।

೪
ಹೋऽ೫ಇ ॥ ಡಾ ॥

*ದೀ - ೨ । ಪ - ೧೦ । ಮಾ - ೪ । ಇ್ । ೨೪ । ೨೦೪ ॥*

ಸ್ವಾರಸೌಪರ್ಣಂ ಶರುಪ್ರವೇತಸಂ ವಾ ॥

೫ ೦ ೦ ೫ ೪ ೩ ೪ ೫೦
೧೨೫.೨. ಉದ್ಘೇದಭಿಶ್ರುತಾಮಾಽ೬ಘಾಮ್ ॥ ವೃಷಭನ್ನರ್ಯಾ ।

೧ ೩ ೫ ೧ ೨ ೨ ೦ ೧
ಹಿಮ್ । ಪಾಽ೨೩೪ಸಾಮ್ ॥ ಆಸ್ತಾಽ೩ಉವಾ ॥ ರಾಮಾ

೨ ೧ ೫ ೪ ೫
ಇ । ಷಿಸೂಽ೨೩೪ವಾ ॥ ರಾಽ೫ಯೋಽ೬ಹಾಇ ॥

*ದೀ - ೪ । ಪ - ೮ । ಮಾ - ೬ । ದೂ । ೨೫ । ೨೦೫ ॥*

ವಿಲಮ್ಬ ಸೌಪರ್ಣಂ ಶರುಪ್ರವೇತಸಂ ವಾ ॥

೪ ೦ ೫ ೪ ೫ ೪೦ ೫ ೪ ೫ ೪. ೫ ೪
೧೨೫.೩. ಉದ್ಘೇದಭಿಶ್ರುತಾಮಘಮ್ । ಈಯಇಯಾಹಾಇ ॥ ವೃ

೩ ೪ ೫೦ ೨ ೨ ೧ ೫
ಷಭನ್ನರ್ಯಾ । ಹಾಽ೩ಹಾಽ೩ಇ । ಪಾಽ೨೩೪ಸಾಮ್ ॥

೧ ೨ ೨ ೧ ^ ೩ ೫೦ ೦
ಆಸ್ತಾಽ೩ಉವ್ವಾಽ೩ ॥ ರಾಽ೨ಮಾಽ೨೩೪ಔಹೋವಾ ॥

೨ ೦ ೩ ೧೧೧
ಷಿಸೂರಿಯಾಽ೨೩೪೫ ॥

*ದೀ - ೬ । ಪ - ೮ । ಮಾ - ೭ । ಗೇ । ೨೬ । ೨೦೬ ॥*

ಅಸ್ಮಿನ್ ದ್ವ್ಯಚೇ ಸೂರ್ಯ ರೂಪೇಣೇನ್ದ್ರಸ್ಯ ಸ್ತುತಿಃ ಕ್ರಿಯತೇ । ಅಸೌ ವಾ ಆದಿತ್ಯ ಇನ್ದ್ರಃ ಇತಿ ಹಾರಿದ್ರವಿಕಮ್ । ಹೇ **ಸೂರ್ಯ!** ದ್ವಾದಶಸು ಭಾನುಷು ಇನ್ದ್ರೋಽಪಿ ಸೂರ್ಯಾತ್ಮನಾ ಪಠಿತಃ ತಸ್ಮಾತ್ ಸೂರ್ಯಾತ್ಮಕ! ಸುವೀರ್ಯ! ಹೇ ಇನ್ದ್ರ! **ಶ್ರುತಾಮಘಮ್** ಸರ್ವದಾ ದೇಯತ್ವೇನ ವಿಖ್ಯಾತ

ಧನಮ್ ಅತ ಏವ **ವೃಷಭಮ್** ಯಾಚಮಾನಾನಾಂ ಧನಸ್ಯ ವರ್ಷಿತಾರಂ **ನರ್ಯಾಪಸಂ** ನರ ಹಿತಂ ನರ್ಯ್ಯಮ್ ನರಹಿತ ಶರ್ಮಾಣಮ್ **ಅಸ್ತ್ರಾರಂ** ದಾನಶೌಂಡಮ್ ಔದಾರ್ಯವನ್ತಮ್ ಏತಾದೃಶಾನುಭಾವಮ್ **ಉದೇಷಿ** ಅಭಿತ ಉದೇಷಿ **ಇದಮ್** ಅವಧಾರಣೇ । ತ್ವಮೇವ ತಸ್ಯ ಯಜ್ಞೇ ಸೂರ್ಯಾತ್ಮನಾ ಉದ್ಗತೋಽಸಿ । ಘ ಇತಿ ಪ್ರಸಿದ್ಧೌ । ನನು ವಾಯುರ್ವೇ ನ್ದ್ರೋ ವಾ ಅನ್ತರಿಕ್ಷ ಸ್ಥಾನಃ ಸೂರ್ಯೋದ್ಯುಸ್ಥಃ । ನಿ.೭.೨.೧ ॥ ಕಥಮಿನ್ದ್ರ ಸೂರ್ಯ ಯೋರೈಕಾತ್ಮ್ಯಮಿತಿ ಶಂಕಾಂ ನಿರಾಕುರ್ವನ್ನಾಹ ದ್ವಾದಶಮಿತ್ಯಾದಿ । ಆದಿತ್ಯಾಶ್ಚ ದ್ವಾದಶ, ತತ್ರಮಾನಮ್ - ಅಷ್ಟೌ ವಸವಃ ಏಕಾದಶ ರುದ್ರಾಃ ದ್ವಾದಶ ಆದಿತ್ಯಾಃ ॥ ತಾಂ.ಮ.ಬ್ರಾ. ೨.೧.೨. ॥ ಸೂರ್ಯಂ ರಸಾನಾಂ ರಶ್ಮೀನಾಂ ಪ್ರಾಣಾನಾಂ ಚ ಜನತ ಈರಣಾತ್ ಸೂರ್ಯಃ - ಛಾಂ.ಉ.೩.೧೭.೭ ॥

**ಸೂರ್ಯ ಸು+ಈರ** ಉತ್ತಮ ರೀತಿಯಲ್ಲಿ, ಸರ್ವಪ್ರೇರಕ ಈಶ್ವರನೇ, ಜಗತ್ ಪ್ರಸಾದ ಹೇತುತ್ವಾತ್ ಸೂರ್ಯಃ - ಜಗತ್ ಸೃಷ್ಟಿಗಾಗಿ ಉತ್ತಮವಾದ ಪ್ರೇರಣೆಯನ್ನು, ನೀಡುವವನೇ ದ್ವಾದಶಾದಿತ್ಯರಲ್ಲಿ ಒಬ್ಬನಾದ ಇನ್ದ್ರನೇ, **ಇತ್** - ಖಚಿತವಾಗಿ ಪ್ರಸಿದ್ಧನಾದ, **ಅಭಿ** - ಸರ್ವಪ್ರಕಾರದಲ್ಲೂ, **ಶ್ರುತಾಮಘಮ್** ಧನವಂತನೆಂದೂ ದಾನಿಯೆಂದೂ ಸುಪ್ರಸಿದ್ಧನಾದ, **ವೃಷಭಮ್** ಬಲಶಾಲಿ ಯಾದ, ಕಾಮನೆಗಳನ್ನು ಈಡೇರಿಸುವ, **ಅಸ್ತ್ರಾರಮ್** ಉದಾರ ಪುರುಷನನ್ನೂ ಶತ್ರುಗಳ ಮೇಲೆ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸುವವ ನನ್ನೂ, **ನರ್ಯಾಪಸಮ್** ಮಾನವರ ಹಿತೈಷಿಯಾದವನನ್ನೂ, **ಉತ್** ಮೇಲಕ್ಕೆ, **ಏಷಿ** ಎಬ್ಬಿಸು.

ಸರ್ವಪ್ರೇರಕನಾದ ಸೂರ್ಯರೂಪೀ ಇನ್ದ್ರನೇ ಬೇಡುವವರ ಇಷ್ಟಾರ್ಥಗಳನ್ನು ಈಡೇರಿಸುವ ಐಶ್ವರ್ಯವಂತನಾದ ಬಹುಬಲಿಶಾಲಿಯಾದ ನೀನು ಶತ್ರುಗಳನ್ನು ಎದುರಿಸುವನನ್ನೂ ಮಾನವರ ಹಿತೈಷಿಯಾದವನನ್ನೂ

ಉದಾರತೆಯುಳ್ಳವನನ್ನೂ ಖಂಡಿತವಾಗಿಯೂ ಮೇಲಕ್ಕೆತ್ತಿ ಅಭ್ಯುದಯವನ್ನುಂಟು ಮಾಡುತ್ತೀಯೆ.

ವಿಶ್ವಸೃಷ್ಟಿಯ ಮೀಂಟುವಿಂದ್ರನೇ! ಆದಿತ್ಯನೇ!
ಸರ್ವವಿಧದಿಂ ದಾನಿ, ವರದನೆಂದೆನಿಪ ವಿಭುವೇ!
ಜನಹಿತರನ್ ಅರಿಭಯಂಕರರನುತ್ಸಾಹಗೊಳಿಸ್ಯೆ ॥

## ಋಕ್ - ೧೨೬

ಸುಕಕ್ಷಶ್ರುತಕಕ್ಷೌ । ಗಾಯತ್ರೀನ್ದ್ರಃ ॥

೨ ೩೧ ೨೦ ೩ ೧೨ ೩೧೨
ಯದದ್ಯ ಕಚ್ಚ ವೃತ್ರಹನ್ನುದಗಾ ಅಭಿಸೂರ್ಯ ।

೨೩ ೧೨ ೩ ೧೨
ಸರ್ವಂ ತದಿನ್ದ್ರ ತೇ ವಶೇ ॥ ೨.೧೨೬ ॥

೨ ೩೨ ೩ ೨ ೩ ೧೨
ಯತ್ - ಅದ್ಯ - ಅ - ದ್ಯ - ಕತ್ - ಚ - ವೃತ್ರಹನ್ - ವೃತ್ರ - ಹನ್ । ಉದಗಾಃ

೩ ೧೨೦ ೩೨ ೩ ೧೨೦ ೩
- ಉತ್ - ಅಗಾಃ - ಅಭಿ - ಸೂರ್ಯ ॥ ಸರ್ವಂ - ತತ್ - ಇನ್ದ್ರ - ತೇ -

೧೨೦
ವಶೇ ॥ ೨.೧೨೬ ॥

ಶಾಕಲಮ್ । ಶಕಲೋ ಗಾಯತ್ರೀನ್ದ್ರ ಸೂರ್ಯೌ ॥

೪ ೪ ೨ ೧೦ ೨ ೧೦
೧೨೬.೧. ಯದದ್ಯಕಾಽ೩ಚ್ಚವೃತ್ರಹಾನ್ ॥ ಉದಗಾಅಭಿಸೂರಾಽ೨

೨ ೧ — ೧ ೨ ೧ ೨ ೧
**೩ಯಾ ॥ ಸಾವಾರ್೨ಇಮ್ ॥ ತಾದಿನ್ವ್ರತಾಯೇ೨೩ । ಹಿ**

೨ ೫
**ಮ್ । ವಾ೨೩೪೫ಶೋ೨೬ಹಾಇ ॥**

*ದೀ - ೨ । ಪ - ೬ । ಮಾ - ೫ । ಚು । ೨೭ । ೨೦೭ ॥*

ಅತ್ರ ಶೌನಕಃ ಯದದ್ಯಕಚ್ಚೇತ್ಯುದಿತೇರವೌ ಸ್ತುತ್ವಾ ಪುರನ್ದರಮ್ । ಗೃಣನ್ನಪಾಹತೇ ರಿಪ್ರಂ ವಶ್ಯಂ ವಾ ಕುರುತೇ ಜಗತ್ । ಇತಿ । ಹೇ **ವೃತ್ರಹನ್** ವೃತ್ರಸ್ಯ ಅಪಾಮಾವರಕಸ್ಯ ಮೇಘಸ್ಯ ಹನ್ತಃ । ಹೇ **ಸೂರ್ಯ** ಸೂರ್ಯಾತ್ಮಕೇನ್ದ್ರ **ಅದ್ಯ** ಅಸ್ಮಿನ್ ದಿನೇ **ಯತ್ ಕಚ್ಚ** ಯತ್ ಕಿಂಚಿತ್ ಪದಾರ್ಥಜಾತಮ್ **ಅಭಿ** ಅಭಿಮುಖೀಕೃತ್ಯ **ಉದಗಾಃ** ಇಣ್ ಗತೌ ಉತ್ಪೂರ್ವಃ ತಸ್ಯಲುಙಿಗಾದೇಶಃ ಉದಯಂ ಪ್ರಾಪ್ತವಾನಸಿ **ತತ್ ಸರ್ವಂ** ಪದಾರ್ಥಜಾತಂ **ತೇ** ತವ **ವಶೇ** ವಶವರ್ತಿ ಸ್ವಾಯತ್ತಮಸ್ತಿ ॥

ಉದಿತೇ ಯದದ್ಯ ಕಚ್ಚ ವೃತ್ರಹನ್ನಿತ್ಯಾ ಕಾಲಂ ಸ್ವಸ್ತ್ಯಯನಂ - ಸಾ.ವಿ.ಬ್ರಾ.೨.೪ ॥ ವೃತ್ರ ಇತಿ ಮೇಘ ನಾಮಸು ॥೧.೧೦.೨೮.೩೦ ॥ ಪಠಿತಂ । ವೃತ್ರಃ ವೃಣೋತೇರಾಚ್ಛಾದನಾರ್ಥಾತ್ ಅಮಿ - ಅಮಿ - ಮಿದ್ ಶಂಸಿಭ್ಯಃ ತ್ರನ್ - ಅಸ್ಮಾದುವಾಜಲುಕಾದ್ ಭವತಿಚಾಚ್ಛಾದಯತಿ ಅಸೌ ಕೃತ್ಸ್ನಂ ನಭಃ । ವರ್ತತೇರ್ವಾ ಗತಿ ಕರ್ಮಣಃ । ಸ್ಫಾತಿ - ತಞ್ಚಿ ಇತ್ಯಾದಿನಾ ರಕ್ ಪ್ರತ್ಯಯಃ । ಗಚ್ಛತ್ಯಸಾ ಕೃತ್ಸ್ನಂ ನಭಃ । ವರ್ಧತೇರ್ವಾ ವೃಷ್ಟ್ಯರ್ಥಾತ್ ವಾಜ್ಜಲಕಾತ್ ಇತಿ ಧಕಾರಸ್ಯ ತಕಾರಃ ವರ್ಧತೇ ಹಿ ವರ್ಷಾಸು ಮೇಘಃ । ಬ್ರಾಹ್ಮಣೋಕ್ತ ಏವಾಮೀ ತ್ರಯೋಽಪ್ಯರ್ಥಾಃ ಇತಿ ದೇವರಾಜ ಯಜ್ವಾ । ಅಥಾಸ್ಯ ಕರ್ಮ - ರಸಾನುಪ್ರದಾನಂ ವೃತ್ರವಧಃ ಇತಿ ನೈ.೭.೩.೩. । ವೃತ್ರ ವಧೋ ಮೇಘವಧಃ - ಇತಿ ತದ್ಭಾಷ್ಯಮ್ ॥

ವಿವರಣ ಮತೇ ಸೂರ್ಯ ಇತಿ ಸುಪಾಂ ಸುಲುಗಿತ್ಯಾದಿನಾ - ೭.೧.೩೯ ಸೋಃರ್ಲುಕಿ ರೂಪಮ್ । ಹೇ ವೃತ್ರಹನ್ ಇನ್ದ್ರ! ಅದ್ಯ ಯತ್ ಕಚ್ಚ ಕಿಂಚಿತ್ ಅಭಿ ಅಭಿಲಕ್ಷ್ಯ ಸೂರ್ಯ ಸೂರ್ಯಃ ಉದಗಾಃ ಉದ್ಗಚ್ಛತಿ ಪ್ರಕಾಶಯತಿ ತತ್ ಸರ್ವಮ್ ತೇ ತವ ವಶೇ ವರ್ತತ ಇತಿ ಶೇಷಃ ಇತ್ಯರ್ಥೋಃ ವಿಂ - ಸಮ್ಮತಃ ॥

ವೃತ್ರ-ಹನ್ ಶತ್ರುನಾಶಕನೇ, ಅಜ್ಞಾನನಾಶಕನೇ ನೀರನ್ನು ತಡೆದಿಟ್ಟಿರುವ ಮೇಘಗಳನ್ನು ಮಳೆಗರೆಯುವಂತೆ ಮಾಡುವವನೇ, **ಸೂರ್ಯ** ಪ್ರೇರಿಸುವವನೇ ಸೂರ್ಯರೂಪೀ ಇನ್ದ್ರನೇ, **ಯತ್ ಅದ್ಯ ಕಚ್ಚ** ಇದೀಗ ಯಾವೆಲ್ಲವೂ, **ಅಭಿ ಉದಗಾ** ನಿನ್ನೆದುರಿನಲ್ಲಿ ಉತ್ಪನ್ನವಾಗಿವೆಯೋ, ಅಭ್ಯುದಯದಲ್ಲಿವೆಯೋ, **ತತ್ ಸರ್ವಮ್** ಅವೆಲ್ಲವೂ, **ತೇ ವಶೇ** ನಿನ್ನ ವಶದಲ್ಲೇ ಅಧೀನದಲ್ಲೇ ಇವೆ.

ಸರ್ವಪ್ರೇರಕನೂ ಅಜ್ಞಾನನಾಶಕನೂ ಸೂರ್ಯಾತ್ಮಕನೂ ಆದ ಇನ್ದ್ರ ಭಗವಂತನೇ ಇಂದು ನಿನ್ನೆದುರಿನಲ್ಲಿಯೇ ಉತ್ಪನ್ನವಾಗಿ ಅಭ್ಯುದಯದಲ್ಲಿರುವ ಸ್ಥಾವರ ಜಂಗಮಾತ್ಮಕವಾದ ಸಮಸ್ತವೂ ನಿನ್ನ ವಶದಲ್ಲಿಯೇ ಅಧೀನದಲ್ಲಿಯೇ ಇವೆ.

*ವೃತ್ರಹರ! ಸೂರ್ಯಸಂಪ್ರೇರಕ! ರಸಪ್ರಕಾಶ!*
*ನಿನ್ನೆದುರದೇನೆಲ್ಲಮುತ್ಪನ್ನಮಿಹುದೊ ಒಳಿತೊ*
*ಅದುವ್ರುಮೆಲ್ಲಂ ನಿನ್ನ ಸಿರಿಯಲ್ತೆ, ಕರುಣಿಸದನೇ! ॥*

# ಋಕ್ - ೧೨೭

ಭಾರದ್ವಾಜಃ । ಗಾಯತ್ರೀನ್ದ್ರಃ ॥

೧ ೨೦ ೩ ೨೩ ೧ ೨ ೩ ೨ ೩ ೧ ೨
ಯ ಆನಯತ್ಪರಾವತಃ ಸುನೀತೀ ತುರ್ವಶಂ ಯದುಮ್ ।

೨೩ ೨ ೩ ೨ ೩ ೧೨
ಇನ್ದ್ರಃ ಸ ನೋ ಯುವಾ ಸಖಾ ॥ ೩.೧೨೭ ॥

೨ ೧೨೦ ೩ ೧೨೦ ೩ ೧೨ ೧೨೦ ೩
ಯಃ - ಆನಯತ್ - ಆ - ಆನಯತ್ - ಪರಾವತಃ । ಸುನೀತೀ - ಸು - ನೀತೀ

೧ ೨ ೧ ೨೦ ೧೨೦ ೩ ೧ ೨೦ ೧೨೦
- ತುರ್ವಶಮ್ - ಯದುಮ್ ॥ ಇನ್ದ್ರಃ - ಸಃ - ನಃ - ಯುವಾ - ಸಖಾ - ಸ -

೩
ಖಾ ॥ ೩.೧೨೭ ॥

ಆಭರದ್ವಸವೇ ದ್ವೇ । ದ್ವಯೋರಾಭರದ್ವಸುರ್ಗಾಯತ್ರೀನ್ದ್ರಃ ॥

೪ ೫ ೧ — ೧
೧೨೭.೧. ಯಅಹಾಉ ॥ ಆನಾಯಾ೨೨ತ್ । ಆನಾಯಾ೨೨೩ತ್ ।

೧ ^ ೩ ೫ ೧ ೦ — ೧ ೦
ಪಾರಾ೨೨ವಾ೨೨೩೪ತಾಃ । ಸುನೀತೀತೂ೨೨ । ಸುನೀತೀ

೧ ೨ ೩ ೫ ೧
ತೂ೨೨೩ । ರ್ವಾಶಂಯಾ೨೨೩೪ದೂಮ್ ॥ ಇನ್ದ್ರಸ್ಸಾನಾ

— ೧ ೧ ^ ೩ ೫೦ ೦
೨೨ಃ । ಇನ್ದ್ರಸ್ಸಾನಾ೨೨೩ಃ ॥ ಯೂ೨೨ವಾ೨೨೩೪ಔಹೋ

೩ ೫
ವಾ ॥ ಸಾ೨೩೪ಖಾ ॥

ದೀ - ೪ । ಪ - ೧೧ । ಮಾ - ೯ । ತೋ । ೨೮ । ೨೦೮ ॥

೪ ೦೫೪ ೫೦ ೫ ೧ ೦ ೦ ೨
೧೨೭.೨. ಯಆನಯತ್ । ಪರಾವಾ೭ತಾಃ ॥ ಸುನೀತೀತುರ್ವಶಾ

೨ ೨ ೧ ೦ ೨ ೨
೧೦ಯಾ೩ದೂಮ್ । ಇನ್ದ್ರಸ್ಸನೋಯುವಾ೧ಸಾ೩

೨ ೩ ೫ ೨ ೧ ೨
ಖಾ ॥ ಇನ್ದ್ರೋ೨೩೪ಗ್ನಾಇ ॥ ಇನ್ದ್ರಾ೩ಹೋ೨೩

೫ ೧ ೨೦ ೧ ^ ೩
೪ । ಗ್ನಾಇ ॥ ಆಇನ್ದ್ರೋಅ । ಗ್ನಾ೨ । ಯಾ೨೩೪

೫೦ ೦ ೩ ೫
ಔಹೋವಾ ॥ ಈ೨೩೪ನ್ದ್ರಾಃ ॥

ದೀ - ೮ । ಪ - ೧೧ । ಮಾ - ೧೧ । ಟ । ೨೯ । ೨೦೯ ॥

**ಯಃ** ಇನ್ದ್ರಃ **ತುರ್ವಶಮ್ ಯದುಮ್** ಚ ಏತತ್ ಸಂಜ್ಞೌ ರಾಜಾನೌ ಶತ್ರುಭಿಃ ದೂರದೇಶೇ ಪ್ರಕ್ಷಿಪ್ತೌ **ಸುನೀತೀ** ಸುನೀತ್ಯಾ ಶೋಭನೇನ ನಯನೇನ **ಪರಾವತಃ** ತಸ್ಮಾದ್ದೂರದೇಶಾತ್ **ಆನಯತ್** ಆನೀತವಾನ್ **ಯುವಾ** ತರುಣಃ **ಸಃ** ಇನ್ದ್ರಃ ನಃ ಅಸ್ಮಾಕಂ **ಸಖಾ** ಭವತು ॥

ಪರಾವತಃ ದೂರವಾಗಿರಿಸಲ್ಪಟ್ಟ, ಪಥಭ್ರಷ್ಟನಾದ ಅಜ್ಞಾನದೆಡೆಗೆ ತಿರುಗಿರುವ, **ಯದುಮ್** ಯದವಃ ಮನುಷ್ಯಾಃ *ನಿಘಂ ೨.೩ ॥,* ಮನುಷ್ಯ ನನ್ನು, ರಾಜನಾದ ಯದುವನ್ನು, **ತುರ್ವಶಮ್** ತುರ್ವಂಶಃ ಅಂಕಿತನಾಮ *ನಿಘಂ ೨.೧೬ ॥* ತನ್ನ ಸಮೀಪದಲ್ಲಿ ಸನ್ಮಾರ್ಗದಲ್ಲಿ, ತುರ್ವಂಶವನ್ನು, **ಸುನೀತೀ** ಪಥ

ಪ್ರದರ್ಶನದಿಂದ, ಸುಂದರ ನೀತಿಯಿಂದ, ಆನಯತ್ ತಂದನು, ಸಃ ಯುವಾ ಆ ಬಲಿಷ್ಠಯುವಕ, ಯಃ ಇನ್ದ್ರಃ ಅಂತಹ ಇನ್ದ್ರನು, ನಃ ಸಖಾ ನಮ್ಮ ಮಿತ್ರನಾಗಲಿ.

ಪಥಭ್ರಷ್ಟನಾದ ದೂರವಾಗಿರಿಸಲ್ಪಟ್ಟ ಮನುಷ್ಯನನ್ನು ರಾಜರುಗಳಾದ ತುರ್ವಶ ಮತ್ತು ಯದುವನ್ನು ಸುಂದರ ನೀತಿಯ ಪಥ ಪ್ರದರ್ಶನಮಾಡಿ ಸನ್ಮಾರ್ಗಕ್ಕೆ ತಂದು ತನ್ನೆಡೆಗೆಳೆದುಕೊಂಡ ಯುವಕನೂ ಬಲಶಾಲಿಯೂ ಆದ ಇನ್ದ್ರನು ನಮಗೆ ಮಿತ್ರನಾಗಲಿ.

ಕಾಪಥಕೆ ಕಾಲಿಟ್ಟ ಯದುಗಳಂ ತುರ್ವಶುಗಳಂ
ಸತ್ಪಥಕೆ ನೀತಿಬಲದಿಂ ತಂದ ಯುವಕನಾತಂ ।
ದೇವನಿಂದ್ರಂ ನಮಗೆ ನೇಗಿಹನೆನಿಕೆನಿಚ್ಚಂ ॥

## ಋಕ್ - ೧೨೮

ಶ್ರುತಕಕ್ಷಃ । ಗಾಯತ್ರೀನ್ದ್ರಃ ॥

೧ ೨ ೩ ೨ಕ ೨ ೩ ೧ ೨ ೩ ೧ ೨ರ
ಮಾ ನ ಇನ್ದ್ರಾಭ್ಯಾಽ೩ ದಿಶಃ ಸೂರೋ ಅಕ್ತುಷ್ವಾ ಯಮತ್ ।

೩ ೧ ೨ ೩ ೨
ತ್ವಾ ಯುಜಾ ವನೇಮ ತತ್ ॥ ೪.೧೨೮ ॥

೨ ೩ ೨ ೩ ೧ ೨ ೩ ೧ ೨ರ ೧ ೨ರ ೩ ೧ ೨
ಮಾ - ನಃ - ಇನ್ದ್ರ - ಅಭಿ - ಆದಿಶಃ - ಆ - ದಿಶಃ । ಸೂರಃ - ಅಕ್ತುಷು - ಆ -

೩ ೨ ೩ ೨ ೩ ೨
ಯಮತ್ ॥ ತ್ವಾಯುಜಾ - ವ - ನೇಮ - ತತ್ ॥ ೪.೧೨೮ ॥

ತಾನ್ವೇ ದ್ವೇ ॥ ದ್ವಯೋಸ್ತ್ವ ನ್ವೋ ಗಾಯತ್ರೀನ್ವ್ರ್ಃ ॥

೧೨೮.೧. ಮಾನಇನ್ದ್ರಾಭಿಯಾದಾಇಶಾಃ ॥ ಸೂರೋಅಕ್ತು । ಷುವಾ
ಯಾ೨೩ಮಾ೨೩೪ತ್ ॥ ತುವಾ೨೩೪ಯುಜಾ ॥ ವನಾ
ಇಮಾ೨೩ತಾ೨೩೪೩ತ್ । ಓ೨೩೪೫ಇ ॥ ಡಾ ॥

ದೀ - ೫ । ಪ - ೭ । ಮಾ - ೮ । ಫೈ । ೩೦ । ೨೧೦ ॥

೧೨೮.೨. ಮಾನಾ೨೩ಆ೨೩ಇನ್ದ್ರಾಭಿಯಾದಿಶಾಃ ॥ ಸೂರೋಆ೨
೩೪ಕ್ತೂ । ಷೂಆಯಾ೨೩೪ಮಾತ್ ॥ ತ್ವಾಯುಜಾವ
ನಾ೨೩ಹೋ ॥ ಮತಾ೨ । ಹುವಾಇ । ಔ೨೩ಹೋ೨
೩೪೫ವಾ೬೫೬ ॥ ಏ೨೩ । ಯಯೂ೨೩೪೫ಃ ॥

ದೀ - ೫ । ಪ - ೯ । ಮಾ - ೮ । ಭೈ । ೩೧ । ೨೧೧ ॥

*ಇತಿ ಗ್ರಾಮೇಗೇಯಗಾನೇ ತೃತೀಯಃ ಪ್ರಪಾಠಕಃ ॥ ೩ ॥*

ಹೇ **ಇನ್ದ್ರ! ಆದಿಶಃ** ಆದೇಷ್ಟಾ ಸಮನ್ತಾದಾಯುಧಾನ್ಯತಿಸೃಜನ್ **ಸೂರಃ** ಸೃಗತೌ - ಭ್ವಾ ಪ - ಸರ್ವತ್ರ ಸರಣಶೀಲಃ ರಾಕ್ಷಸಃ **ಅಕ್ತುಷು** ರಾತ್ರಿಷು **ನಃ** ಅಸ್ಮಾಕಂ **ಅಭ್ಯಾಯಮತ್** ಆ ಆಭಿಮುಖ್ಯೇನ **ಮಾ** ನಿಯನ್ತಾಽಗನ್ತಾ ಭವತು । ಯದ್ಯಾಗನ್ತಾ ಚೇತ್ ತದಾ **ತತ್** ರಕ್ಷಃ **ತ್ವಾಯುಜಾ** ತ್ವತ್ಸಹಾಯೇನ

ವಯಂ ವನೇಮ ಹನ್ಯಾಮ ಶ್ವಥ ಕ್ರಥ ಹಿಂಸಾರ್ಥಾಃ ವನ ಚೇತ್ಯತ್ರ - ಭ್ವಾ ಪ - ಪಠಿತತ್ವಾದ್ಧಿಂ ಸಾರ್ಥಃ । ಆಯಮತ್ ಆಯಮನ್ ಇತಿ ಚ ಪಾಠೌ ॥

ಇನ್ದ್ರ, ಸೂರ್ಯರೂಪೀ ಭಗವಂತನೇ, ಮನಸ್ಸೇ, **ನಃ ಅಭಿ** ನಮ್ಮ ಸಮ್ಮುಖದಲ್ಲಿ, **ಆದಿಶಃ** ಎಲ್ಲಾ ದಿಕ್ಕಿನಲ್ಲೂ, ಸುತ್ತುಮುತ್ತಲೂ, **ಸೂರಃ** ಸರ್ವದಾ ಸರ್ವತ್ರ ಸಂಚರಿಸುತ್ತಾ ಪೀಡಿಸುತ್ತಿರುವ ರಾಕ್ಷಸರು, ಕಾಮಕ್ರೋಧಾದಿ ಗಳು, **ಅಕ್ತುಷು** ರಾತ್ರಿಯಲ್ಲಿ, ಅಜ್ಞಾನವೆಂಬ ತಮಸ್ಸಿನಲ್ಲಿ, **ನಃ ಮಾ ಅಭ್ಯಾಯ ಮತ್** ನಮ್ಮೆದುರು ಬರದಿರಲಿ, ನಮ್ಮನ್ನು ಆಕ್ರಮಿಸಿ ಪೀಡಿಸದಿರಲಿ, **ತತ್** ಒಂದು ಪಕ್ಷ ಆಕ್ರಮಿಸಿದ ಶತ್ರುಗಳನ್ನು ದುಷ್ಟರನ್ನು, **ತ್ವಾಯುಜಾ** ನಿನ್ನ ಸಹಾಯದಿಂದ ಕೃಪೆಯಿಂದ, **ವನೇಮ** ಸಂಹರಿಸುವಂತಾಗಲಿ.

ದಿವ್ಯವಾದ ಮನಸ್ಸೇ ಅಜ್ಞಾನದ ತಾಮಸಾವಸ್ಥೆಯಲ್ಲಿ ಕಳ್ಳರಂತೆ ನಾಲ್ಕೂ ಕಡೆಯಿಂದ ನಮ್ಮನ್ನು ಮುತ್ತುವ ಕಾಮಕ್ರೋಧಾದಿ ಶತ್ರುಗಳು ಯಾವ ಕಡೆಯಿಂದಲೂ ನಮ್ಮನ್ನು ಆಕ್ರಮಿಸದಿರಲಿ. ಹಾಗೇನಾದರೂ ಶತ್ರುಗಳು ನಮ್ಮನ್ನು ಆಕ್ರಮಿಸಿದರೆ ನಾವು ನಿನ್ನ ಸಹಾಯದಿಂದ ಅವರನ್ನು ಸೋಲಿಸಿ ಗೆಲ್ಲುತ್ತಿರೋಣ.

ಇನ್ದ್ರನೇ ಶಸ್ತ್ರಾಸ್ತ್ರಪ್ರಯೋಗ ಪರಿಣತರಾದ ರಾತ್ರಿ ಹಗಲುಗಳಲ್ಲಿ ಸರ್ವತ್ರ ಸಂಚರಿಸುತ್ತಿರುವ ರಾಕ್ಷಸರ ಅಧೀನಕ್ಕೆ ನಾವು ಒಳಗಾಗದಂತಾಗಲಿ. ಆ ರಾಕ್ಷಸ ಸಮೂಹವನ್ನು ನಿನ್ನ ಸಹಾಯದಿಂದ ನಾವು ಸಂಹರಿಸುವಂತಾಗಲಿ.

*ಎಲ್ಲದಿಶೆಗಳಿನೆಮ್ಮನಾವರಿಸಿ ಪೀಡಿಸಿರ್ಪ*
*ರಾತ್ರಿಯೊಳ್ ಕ್ರೋಧಕಾಮಾದಿ ದೈತ್ಯಾಳಿಯೆಂನಾಮ್ ।*
*ನಿನ್ನ ನೆರವಿಂದ ಗೆಲ್ವಂತಾಗಲೆಂದುಮಿಂದ್ರ! ॥*

# ಋಕ್ - ೧೨೯

ಮಧುಚ್ಛನ್ದಾವೈಶ್ವಾಮಿತ್ರಃ । ಗಾಯತ್ರೀನ್ದ್ರಃ ॥

೧ ೨    ೩ ೨    ೩ ೨    ೩೧೨    ೩ ೧೨
ಏನ್ದ್ರ ಸಾನಸಿಽꣳ ರಯಿꣳ ಸಜಿತ್ವಾನಽꣳ ಸದಾಸಹಮ್ ।

೧ ೨   ೩   ೧ ೨
ವರ್ಷಿಷ್ಠಮೂತಯೇ ಭರ ॥ *ಋ.೧೨೯* ॥

೨ ೩    ೨    ೩ ೨    ೩೧೨    ೩ ೧ ೨೦
ಆ - ಇನ್ದ್ರ - ಸಾನಸಿಮ್ - ರಯಿಮ್ । ಸಜಿತ್ವಾನಮ್ - ಸ - ಜಿತ್ವಾನಮ್ -

೩ ೧೨   ೩   ೧೨೦   ೧೨೦   ೩೧೨   ೩
ಸದಾಸಹಮ್ - ಸದಾ - ಸಹಮ್ ॥ ವರ್ಷಿಷ್ಠಮ್ - ಊತಯೇ - ಭರ ॥

ರೋಹಿತಕೂಲೀಯೇ ದ್ವೇ । ದ್ವಯೋರಿನ್ದ್ರೋ ವಿಶ್ವಾಮಿತ್ರೋ ವಾ । ಗಾಯತ್ರೀನ್ದ್ರಃ ॥

೪೦೫ ೪   ೨೧   ೦   ೨೧೦
೧೨೯.೧. ಏನ್ದ್ರಸಾ ॥ ನಸಿꣳ ರಯಿಮ್ । ಸಜಿತ್ವಾನꣳ ಸದಾಸಾಽ೨

೨   ೧   ೨   ೧ ೦ ೨
೩ಹಾಮ್ ॥ ವಾಽ೨೩ರ್ಷಿ ॥ ಷ್ಠಾಮೂತಯಾಽ೩೧ಉ

೨   ೫
ವಾಯೇಽ೩ ॥ ಭಾಽ೨೩೪ರಾ ॥

*ದೀ - ೪ । ಪ - ೬ । ಮಾ - ೩ । ತಿ । ೧ । ೨೧೨ ॥*

೪೦೫ ೦ ೪   ೨   —   ೧೦
೧೨೯.೨. ಏನ್ದ್ರಸಾನಸಾಇಮ್ ॥ ರಯಾಽ೨ಇಮ್ । ಸಜಿತ್ವಾನꣳ

೨ ೧೧ ೨ ೧ — ೧
ಸದಾಸಾऽ೨೩ಹಾಮ್ ॥ ವಾರ್ಷಿ೯ऽ೨ಷ್ಠ್ಯಮೂऽ೨೩ ॥

೨ ೧ ೫ ೪ ೫
ತಯೋऽ೨೩ಳವಾ ॥ ಭಾऽಶಿರೋऽ೬ಹಾಇ ॥

*ದೀ - ೪ । ಪ - ೬ । ಮಾ - ೬ । ತೂ । ೨ । ೨೧೩ ॥*

**ಹೇ ಇನ್ದ್ರ! ಊತಯೇ** ಅಸ್ಮದ್ರಕ್ಷಾರ್ಥಮ್ **ರಯಿಮ್** ಧನಮ್ **ಆಭರಾ** ಆಹರ ಕೀದೃಶಮ್ ರಯಿಮ್ **ಸಾನಸಿಮ್** ಸಂಭಜನೀಯಮ್ **ಸಜಿತ್ವಾನಮ್** ಸಮಾನ ಶತ್ರುಜಯಶೀಲಮ್ ಧನೇ ನ ಹಿ ಶೂರಾನ್ ಭೃತ್ಯಾನ್ ಸಂಪಾದ್ಯ ಶತ್ರವೋ ಜೀಯನ್ತೇ **ಸದಾಸಹಮ್** ಸರ್ವದಾ ಶತ್ರೂಣಾಮಭಿಭವನ ಹೇತುಮ್ **ವರ್ಷಿಷ್ಠಮ್** ಅತಿಶಯೇನ ವೃದ್ಧಮ್ ಪ್ರಭೂತಮಿತ್ಯರ್ಥಃ ॥

**ಇನ್ದ್ರ** ಇನ್ದ್ರನೇ, **ಊತಯೇ** ಸ್ವರಕ್ಷಣೆಗಾಗಿಯೂ, **ಸಾನಸಿಮ್** ಉಪಭೋಗಕ್ಕಾಗಿಯೂ, ಭಜಿಸಲು ಯೋಗ್ಯವಾದ, ಸ್ತುತ್ಯವಾದ, **ಸಜಿತ್ವಾನಮ್** ಶತ್ರುಗಳನ್ನು ಜಯಿಸುವುದಕ್ಕಾಗಿಯೂ, **ಸದಾಸಹಮ್** ಸದಾ ಶತ್ರುಗಳ ದಮನ ಮಾಡುತ್ತಿರುವುದಕ್ಕಾಗಿಯೂ, ವಿಜಯಸೇನಾ ಸಮೂಹವನ್ನಿಟ್ಟುಕೊಂಡಿರಲೂ, **ವರ್ಷಿಷ್ಠಮ್** ಬಹು ಹೆಚ್ಚಿನ, ವಿಪುಲವಾದ, ಶ್ರೇಷ್ಠವಾದ, **ರಯಿಮ್** ಧನವನ್ನು, **ಆಭರ** ದಯಪಾಲಿಸು.

ಐಶ್ವರ್ಯಶಾಲಿಯಾದ ಇನ್ದ್ರನೇ ನಮ್ಮ ಸ್ವರಕ್ಷಣೆಗಾಗಿಯೂ ಉಪಭೋಗಕ್ಕಾಗಿಯೂ ಶತ್ರುಗಳನ್ನು ಜಯಿಸುವುದಕ್ಕಾಗಿಯೂ ಸದಾ ಶತ್ರುಗಳನ್ನು ದಮನ ಮಾಡುತ್ತಿರುವುದಕ್ಕಾಗಿಯೂ ಸ್ತುತ್ಯವೂ ಶ್ರೇಷ್ಠವೂ ವಿಪುಲವೂ ಆದ ಧನವನ್ನೂ ಆಂತರಿಕ ಬಲವನ್ನೂ ದಯಪಾಲಿಸು.

ಸಿರಿವಂತ ಮಘವಂತ! ನಮ್ಮ ಸುಖ-ರಕ್ಷೆಗಾಗಿ,
ರಿಪುಜಯಿಕ್ಕಾಗಿ ಪರಿಪಂಥಿಗಳ ದಮನಕಾಗಿ ।
ಸ್ತುತ್ಯಸುವಿಪುಲಧನಮನೀವುದಾಂತರ್ಯಬಲಮಂ ॥

## ಋಕ್ - ೧೩೦

ಮಧುಚ್ಛನ್ದಾ ವೈಶ್ವಾಮಿತ್ರಃ। ಗಾಯತ್ರೀನ್ದ್ರಃ ॥

೧ ೨ ೩ ೧ ೨ ೩ ೨ು ೩ ೧ ೨
ಇನ್ದ್ರಂ ವಯಂ ಮಹಾಧನ ಇನ್ದ್ರಮರ್ಭೇ ಹವಾಮಹೇ ।

೧ ೨ ೩ ೧ ೨ ೩ ೧ ೨
ಯುಜಮ್ ವೃತ್ರೇಷು ವಜ್ರಿಣಮ್ ॥ ೬.೧೩೦ ॥

೧ ೨೦ ೩ ೨ ೩ ೨ ೩ ೨ ೧ ೨೦ ೧
ಇನ್ದ್ರಮ್ - ವಯಮ್ - ಮಹಾಧನೇ - ಮಹಾ - ಧನೇ । ಇನ್ದ್ರಮ್ - ಅ

೨೦ ೩ ೧ ೨೦ ೩ ೧ ೨ ೩ ೧ ೨
ರ್ಭೇ - ಹವಾಮಹೇ ॥ ಯುಜಂ - ವೃತ್ರೇಷು - ವಜ್ರಿಣಂ ॥ ೬.೧೩೦ ॥

ಇನ್ದ್ರಾಣ್ಯಾಃ ಸಾಮನೀ ದ್ವೇ । ದ್ವಯೋರಿನ್ದ್ರಾಣೇ ಗಾಯತ್ರೀನ್ದ್ರಃ ॥

೧ ೩ — ೧ ೩ ೦
೧೩೦.೧. ಇನ್ದ್ರಾಮ್ । ಇನ್ದ್ರವಾಯಾऽ೨ಮ್ ॥ ಮಹಾ । ಮಹಾ

— ೧ ೩ — ೧
ಧಾನಾऽ೨ಇ । ಇನ್ದ್ರಾಮ್ । ಇನ್ದ್ರಮಭಾರ್ऽ೨ಇ । ಹ

೩೦ — ೧ ೩
ವಾ । ಹವಾಮಾಹಾऽ೨ಇ ॥ ಯುಜಾಮ್ । ಯುಜಂವೃ

ತ್ರಾ॒ऽ೨ಇ ॥ ಘುವಾ । ಘುವಜ್ರಿಣಾऽ೨೩೪೩ಮ್ । ಓऽ೨೩
೪೫ಇ ॥ ಡಾ ॥

*ದೀ - ೨ । ಪ - ೧೪ । ಮಾ - ೧೦ । ಝೌ । ೩ । ೨೧೪ ॥*

೧೩೦.೨. ಇನ್ದ್ರಂ ವಯಾಮ್ ॥ ಮಹಾ । ಮಹಾಧಾನಾऽ೨೩ಇ । ಆ
ಔऽ೩ಹೋ । ಇಹ । ಇಹಿವಾಲಾ । ಓऽ೨೩೪ವಾ । ಇನ್ದ್ರ
ಮರ್ಭಾ೯ಇ ॥ ಹವಾ । ಹವಾಮಾಹಾऽ೨೩ಇ । ಆಔऽ೩
ಹೋ । ಇಹ । ಇಹಿವಾಲಾ । ಓऽ೨೩೪ವಾ ॥ ಯುಜಂವೃ
ತ್ರಾಇ ॥ ಘುವಾ । ಘುವಜ್ರಿಣಾऽ೨೩ಮ್ । ಆಔऽ೩
ಹೋ । ಇಹ । ಇಹಿವಾಲಾ । ಓऽ೨೩೪ವಾ ॥ ಈऽ೨೩೪
ಹಾ ॥ *ದೀ - ೨ । ಪ - ೨೨ । ಮಾ - ೯ । ಥೋ । ೪ । ೨೧೫ ॥*

**ವಯಮ್** ಅನುಷ್ಠಾತಾರಃ **ಮಹಾಧನೇ** ಪ್ರಭೂತ ಧನ ನಿಮಿತ್ತಮ್ **ಇನ್ದ್ರಮ್** । **ಹವಾಮಹೇ** ಆಹ್ವಯಾಮಃ **ಅರ್ಭೇ** ಅರ್ಭಕೇ ಸ್ವಲ್ಪೇಪಿ ಧನೇ ನಿಮಿತ್ತಭೂತೇ ಸತಿ ಇನ್ದ್ರಂ ಹವಾಮಹೇ । ಕೀದೃಶಮ್ **ಇನ್ದ್ರಮ್**? **ಯುಜಂ** ಸಹಕಾರಿಣಂ ಸಮಾಹಿತಂ ವಾ । **ವೃತ್ರೇಷು** ಶತ್ರುಷು ಧನಲಾಭ ವಿರೋಧಿಷು

ಪ್ರಾಪ್ತೇಷು ತನ್ನಿವಾರಣಾಯ **ವಜ್ರಿಣಂ** ವಜ್ರೋಪೇತಮ್ । ಮಹಾಧನ ಶಬ್ದೋ ಯದ್ಯಪಿ ಸಂಗ್ರಾಮವಾಚೀ ತಥಾಪಿ ಮಹದ್ಧನಮತ್ರ ವಿವಕ್ಷಿತಮ್ ॥

**ಯುಜಂ ವಜ್ರಿಣಮ್ ಇನ್ದ್ರಮ್** ವಜ್ರಾಯುಧ ಧರಿಸಿರುವ ಇನ್ದ್ರನನ್ನು **ವೀರ್ಯಂ ವೈ ವಜ್ರಃ** - *ಶಂ.೭.೩.೧-೧೯* ॥ **ವಜ್ರೋ ವಾ ಓಜಃ** *ಶಂ.೮.೪.೧-೨೦* ॥ ವೀರ್ಯವಂತನೂ ಓಜಸ್ವಿಯೂ ಆದ ಇನ್ದ್ರನನ್ನು ಪರಮೇಶ್ವರನನ್ನು, ಮಹಾಧನೇ ಭಯಂಕರ ಯುದ್ಧದಲ್ಲೂ, ಐಶ್ವರ್ಯದಲ್ಲೂ, **ಅರ್ಭೇ** ಪುಟ್ಟ ಯುದ್ಧದಲ್ಲೂ, ಸ್ವಲ್ಪವೇ ಐಶ್ವರ್ಯದಲ್ಲೂ, **ವೃತ್ರೇಷು** ವೃತ್ರಾಸುರನೊಡನೆ ನಡೆಯುವ ಯುದ್ಧದಲ್ಲೂ, ಅಜ್ಞಾನಾದಿ ದೋಷ ವಿಘ್ನಗಳ ನಿವಾರಣೆಗಾಗಿಯೂ, **ಹವಾಮಹೇ** ಆಹ್ವಾನಿಸುತ್ತೇವೆ.

ಚಿಕ್ಕ ಅಥವಾ ದೊಡ್ಡಯುದ್ಧದಲ್ಲಿ ಸಹಾಯಕ್ಕಾಗಿಯೂ ಸ್ವಲ್ಪ ಅಥವಾ ಬಹಳ ಐಶ್ವರ್ಯ ಪ್ರಾಪ್ತಿಗಾಗಿಯೂ, ಅಜ್ಞಾನಾದಿ ದೋಷ ನಿವಾರಣೆಗಾಗಿಯೂ ವಜ್ರಹಸ್ತನೂ ಐಶ್ವರ್ಯವಂತನೂ ಓಜಸ್ವಿಯೂ ಆದ ಇನ್ದ್ರನನ್ನು ಆಹ್ವಾನಿಸುತ್ತೇವೆ.

ಜೀವನದುದ್ದಕ್ಕೂ ಬದುಕಿಗೆ ಎದುರಾಗುವ ಸಮಸ್ತ ಸೆಣಸಾಟಗಳ ಸಹಾಯಕ್ಕಾಗಿಯೂ ಇನ್ದ್ರನ ಮೊರೆ ಹೋಗುತ್ತೇವೆ.

*ರಣಭಯಂಕರವಜ್ರಿಯಂ ಸಂಪದೀಶನಂ ನಾಮ್*
*ಜೀವನದ ರಣದಲ್ಲಿ, ಜೀವಿಕಾಕಷ್ಟದಲ್ಲಿ ।*
*ನಿರ್ವಿಘ್ನಸುಜ್ಞಾನದಾಪ್ತಿಗೆನೆ ಮೊರೆವೊಗುವೆವು ॥*

# ಋಕ್ - ೧೩೧

ತ್ರಿಶೋಕಃ ಕಾಣ್ವಃ । ಗಾಯತ್ರೀನ್ದ್ರಃ ॥

೧ ೨ ೩ ೧ ೨ ೩ ೧ ೨೧ ೩ ೧ ೨
ಅಪಿಬತ್ಕದ್ರುವಃ ಸುತಮಿನ್ದ್ರಃ ಸಹಸ್ರಬಾಹ್ವೇ ।

೧ ೨ ೩ ೧ ೨
ತತ್ರಾದದಿಷ್ಟ ಪೌಂಸ್ಯಮ್ ॥ ೭.೧೩೧ ॥

೧ ೨೧ ೩ ೧ ೨ ೩ ೧ ೨೧ ೩ ೨ ೧ ೨೧ ೩ ೧ ೨
ಅಪಿಬತ್ - ಕದ್ರುವಃ - ಕತ್ - ದ್ರುವಃ - ಸುತಮ್ । ಇನ್ದ್ರಃ - ಸಹಸ್ರಬಾಹ್ವೇ

೩ ೧ ೨ ೩ ೧ ೨೧ ೩ ೨೧
- ಸಹಸ್ರ - ಬಾಹ್ವೇ ॥ ತತ್ರ - ಅದದಿಷ್ಟ - ಪೌಂಸ್ಯಮ್ ॥ ೭.೧೩೧ ॥

ಸಹಸ್ರಬಾಹವೀಯಮ್ । ಇನ್ದ್ರೋ ಗಾಯತ್ರೀನ್ದ್ರಃ ॥

೫ ೦ ೫ ೧ ‾
೧೩೧.೧. ಅಪಿಬತ್ಕಾದ್ರೂ೩೭ವಸ್ಸುತಾಮ್ ॥ ಇನ್ದ್ರಾಹೋ೭೨ಇ ।

೧ ‾ ೧ ೨ ‾ ೧೦
ಸಹಾಹೋ೭೨ । ಸ್ರಾಬಾ೭೧ಹುವೇ೭೨ ॥ ತತ್ರಾದಾ೭೨೩

೨ ‾ ‾ ೧ ‾ ನ ೨
ದೀ ॥ ಷ್ಟಪೌ೭೨ । ಹೌ೭೨ । ಹುವಾ೭೨ಇ । ಈ೭೩ಯಾ ।

೧ ೪ ೫ ೪
ಸಿಯಾಮ್ । ಔ೭೨೩ಹೋವಾ । ಹೋ೭೫ಇ ॥ ಡಾ ॥

*ದೀ - ೨ । ಪ - ೧೩ । ಮಾ - ೫ । ಜು । ೫ । ೨೧೬ ॥*

**ಇನ್ದ್ರಃ ಕದ್ರುವಃ** ಕದ್ರುನಾಮಕಸ್ಯ ಋಷೇಃ ಸಂಬಂಧಿನಂ **ಸುತಮ್** ಅಭಿಷುತಂ ಸೋಮಂ **ಅಪಿಬತ್** ಪೀತವಾನ್ । **ಸಹಸ್ರಬಾಹ್ವೇ** ಸಹಸ್ರಬಾಹ್ವಾಖ್ಯಂ ಶತ್ರುಮ್ ಅಹನ್ನಿತಿ ಶೇಷಃ । **ತತ್ರ** ತಸ್ಮಿನ್ನವಸರೇ **ಪೌಂಜ್ಸ್ಯಮ್** ಇನ್ದ್ರಸ್ಯ ವೀರ್ಯಮ್ **ಆದದಿಷ್ಟ** ಆ ದೀಪ್ಯತ । **ತತ್ರಾದದಿಷ್ಟ** ಇತಿ ಛಂದೋಗಾಃ । **ಅತ್ರಾದದಿಷ್ಟ** ಇತಿ ಬಹ್ವೃಚಾಃ ॥

ಇನ್ದ್ರಂ ಇನ್ದ್ರನು, **ಕದ್ರುವಃ** ಕದ್ರು ಎಂಬ ಋಷಿಯು, ಕದ್ರು - ಪೀತವರ್ಣ, ಅಮರ ಹಳದಿ ಬಣ್ಣದ, ಮಾಗಿದ, **ಸುತಮ್** ಹಿಂಡಿದ ಸೋಮ ರಸವನ್ನು, **ಅಪಿಬತ್** ಕುಡಿದನು, ಸೇವಿಸಿದನು, **ಸಹಸ್ರಬಾಹ್ವೇ** ಸಾವಿರಾರು ಭುಜಗಳ ಶತ್ರುಸಮೂಹವನ್ನು ಬಹಳವಾಗಿ ಬಾಧಿಸುವ ಶತ್ರುಗಳನ್ನು ಸಹಸ್ರಬಾಹುವೆಂಬ ಶತ್ರುವನ್ನು ಕೊಂದು, **ತತ್ರ** ಅಲ್ಲಿ, **ಪೌಂಜ್ಸ್ಯಮ್ ಆದದಿಷ್ಟ** ಪೌರುಷವನ್ನು ಮೆರೆಸಿದನು, ಶಕ್ತಿ ಸಾಮರ್ಥ್ಯವನ್ನು ತೋರಿಸಿದನು.

ಕದ್ರುವೆಂಬ ಋಷಿಯು ಸಿದ್ಧಪಡಿಸಿದ ಪಕ್ವವಾದ ಸೋಮರಸವನ್ನು ಸೇವಿಸಿದ ಇನ್ದ್ರನು ಸಹಸ್ರಬಾಹುವೆಂಬ ಶತ್ರುವನ್ನೂ ಶತ್ರುಸಮೂಹವನ್ನೂ ಕೊಂದು ತನ್ನ ಪೌರುಷ ಶಕ್ತಿ ಸಾಮರ್ಥ್ಯಗಳನ್ನು ಪ್ರದರ್ಶಿಸಿದನು.

*ಕದ್ರುಮುನಿ ಸಜ್ಜುಗೆಯ್ದಿತಿಪಕ್ವಸೋಮರಸಮಂ*
*ಸವಿದ ಜಂಭಾರಿ ಸಾಸಿರತೋಳ್ಗಳಸುರಕುಲಮಂ ।*
*ಸದೆದು ತನ್ನಯ ಶೌರ್ಯಶಕ್ತಿಯಂ ಮೆರೆದನಲ್ತೆ ॥*

# ಋಕ್ - ೧೩೨

ವಸಿಷ್ಠೋ ಮೈತ್ರಾವರುಣಿಃ । ಗಾಯತ್ರೀನ್ದ್ರಃ ॥

೩ ೧ ೨ ೩ ೨ ೩ ೧ ೨೦
ವಯಮಿನ್ದ್ರ ತ್ವಾಯವೋಽಭಿ ಪ್ರ ನೋನುಮೋ ವೃಷನ್ ।

೩ ೨ ಕ ೧ ೨
ವಿದ್ಧೀ ತ್ವಾಽಸ್ಯ ನೋ ವಸೋ ॥ ೮.೧೩೨ ॥

೩ ೨ ೩ ೧ ೨ ೩ ೨ ೩ ೨
ವಯಂ - ಇನ್ದ್ರ - ತ್ವಾಯವಃ । ಅಭಿ - ಪ್ರ - ನೋನುಮಃ - ವೃಷನ್ ॥ ವಿದ್ಧಿ -

೩ ೨ ೩
ತು - ಅಸ್ಯ - ನಃ - ವಸೋ ॥ ೮.೧೩೨ ॥

ಧೃಷತೋ ಮಾರುತಸ್ಯ ಸಾಮ । ಧೃಷನ್ ಮರುತ್ ಗಾಯತ್ರೀನ್ದ್ರಃ ॥

೨ ೧ ೫ ೧ ೧ ^ ೩
೧೩೨.೧. ವಯಮಾಽ೨೩೪ಇನ್ದ್ರಾ ॥ ತ್ವಾಽ೨೩ । ಯಾಽ೨ವಾಽ೨೩

೫೦ ೦ ೨೧ ೨ಂ ೦
೪ಔಹೋವಾ । ಅಭಿಪ್ರನೋಽ೨ನುಮೋವೃಷನ್ ॥ ವಿ

^ ೩ ೨ ೧ ^ ೩ ೫೦ ೦
ದ್ಧಾಇತುವಾಽ೩ ॥ ಸ್ಯಾಽ೨ನಾಽ೨೩೪ಔಹೋವಾ ॥ ವಾಽ

೫
೨೩೪ಸೋ ॥

ದೀ - ೬ । ಪ - ೭ । ಮಾ - ೫ । ಖು । ೬ । ೨೧೭ ॥

ಆದಾರಸೃತ್ । ಭರದ್ವಾಜೋ ಗಾಯತ್ರೀನ್ದ್ರಃ ॥

೫೦ ೧ ೧
೧೩೨.೨. ಹಾಉವಯಮಿನ್ದ್ರಾ ॥ ತ್ವಾಽ೨ಯಾವಾಽ೨ಃ । ಅಭಿಪ್ರ

೦ — ೧ — — ೧
ನೋಽನುಮೋಽ೨ವಾರ್ಷಾ೨ನ್ ॥ ವಿದ್ಧಾಽ೨ಇತೂವಾ

— ೧ ೧ ^ ೩ ೫೦೦ ೨
ಽ೨ ॥ ಸ್ಯನೋಽ೨೩ । ವಾಽ೨ಸಾಽ೨೩೪ಔಹೋವಾ ॥ ಅ

೧೨ ೦ ೧೨೩ ೧೧೧
ಸ್ಮಭ್ಯಂಗಾತುವಿತ್ತಮಾಽ೨೩೪೫ಮ್ ॥

*ದೀ - ೫ । ಪ - ೭ । ಮಾ - ೯ । ಪೂ । ೭ । ೨೧೮ ॥*

ಧೃಷತೋ ಮಾರುತಸ್ಯಸಾಮ । ಧೃಷನ್ಮರುತ್ ಗಾಯತ್ರೀನ್ದ್ರಃ ॥

೫ ೧ ೨ ೨ ೧ ೦ ೨
೧೩೨.೩. ವಯಮಿನ್ದ್ರಾ ॥ ತ್ವಾಯಾಽ೩ವಾಃ । ಅಭಿಪ್ರನೋಽನುಮೋ

೨ ೨ ^ ೩ ೫ ೩
ಽ೧ವಾಽ೩ರ್ಷಾನ್ ॥ ವಿದ್ಧೀತೂಽ೨೩೪ವಾ । ಓಽ೨೩೪

೫ ೪ ೫ ೪ ೫
ಹಾಇ ॥ ಸ್ಯನೋವಾ ॥ ವಾಽ೫ಸೋಽ೬ಹಾಇ ॥

*ದೀ - ೧ । ಪ - ೭ । ಮಾ - ೪ । ಖೀ । ೮ । ೨೧೯ ॥*

ಆದಾರಸ್ಪತೀ ದ್ವೇ । ದ್ವಯೋರ್ಭರದ್ವಾಜೋ ಗಾಯತ್ರೀನ್ದ್ರಃ ॥

೫ ೦ ೪೦ ೫ ೪ ೫ ೧ ೨ ೨ ೧
೧೩೨.೪. ವಯಾಮಾಽಹೋ । ಇನ್ದ್ರಾ ॥ ತ್ವಾಯಾಽ೩ವಾಃ । ಅಭಿಪ್ರ

೦ ೨ ೨ ೨ ೦ ೩
ನೋಽನುಮೋಽ೧ವಾಽ೩ರ್ಷಾನ್ ॥ ವಿದ್ಧೀತ್ವೋಽ೨೩೪

೫ ೧ ೨ ೨ ೧ ೨ ೪ ೫
ಹಾಇ ॥ ಸ್ಯಾನೋಽ೩ಹಾಇ । ವಸಾ । ಔಽ೩ಹೋವಾ ।

೪
ಹೋ೬೩ಇ ॥ ಡಾ ॥

ದೀ - ೪ । ಪ - ೧೦ । ಮಾ - ೫ । ನು । ೯ । ೨೨೦ ॥

೧೩೨.೫. ವಯಾಮೌಹೋವಾಹಾಇ । ಇನ್ದ್ರಾ । ತ್ವಾಔಹೋವಾ
ಹಾಇ । ಯಾವಾಃ ॥ ಆ೬೨೩ಭೀ । ಪ್ರಾ೬೨೩ನೋ । ಓಇ
ನುಮೋವಾ೬೨೩ಷಾ೯ನ್ ॥ ವಾ೬೨೩ಇದ್ಧೀ । ತೂ೬೨೩
ವಾ೬೩ ॥ ಸ್ಯಾ೬೨ನಾ೬೨೩೪ಔಹೋವಾ ॥ ವಾ೬೨೩೪
ಸೋ ॥ ದೀ - ೫ । ಪ - ೧೧ । ಮಾ - ೮ । ಪೈ । ೧೦ । ೨೨೧ ॥

ಹೇ **ವೃಷನ್!** ಕಾಮಾನಾಂ ವರ್ಷಿತಃ । **ಇನ್ದ್ರ!** **ತ್ವಾಯವಃ** ತ್ವತ್ಕಾಮಾಃ **ವಯಮ್** ವಾಸಿಷ್ಠಾಃ ತ್ವಾಮ್ **ಅಭಿ ಪ್ರ ನೋನುಮಃ** ಪ್ರಕರ್ಷೇಣ ಸ್ತುಮಃ ಹೇ **ವಸೋ!** ವಾಸಯಿತಃ ಇನ್ದ್ರ! **ಅಸ್ಯ** ಇದಂ **ನಃ** ॥ ಅಸ್ಮದೀಯಂ ಸ್ತೋತ್ರಂ ನು ಕ್ಷಿಪ್ರಂ ವಿದ್ಧೀ ಅವಧಾರಯ ॥

**ವೃಷನ್ ಇನ್ದ್ರ** ಕಾಮನೆಗಳನ್ನು ಈಡೇರಿಸುವ ಇನ್ದ್ರನೇ, **ತ್ವಾಯವಃ ವಯಮ್ ಆಯವಃ** ಮನುಷ್ಯನಾಮ ನಿಘಂ. ೨.೩., **ತ್ವಾ ಅಭಿ** ನಿನ್ನಲ್ಲಿ ಶರಣಾಗುವ, ನಿನ್ನವರಾಗಬಯಸುವ, **ಅಭಿಪ್ರನೋನುಮಃ** ನಿನ್ನ ಸಮ್ಮುಖದಲ್ಲಿ ಭಕ್ತಿಯಿಂದ ನಮಸ್ಕರಿಸುವೆವು, **ಹೇ ವಸೋ** ನಮ್ಮೆಲ್ಲ ಐಶ್ವರ್ಯಗಳಿಗೂ ಒಡೆಯನಾಗಿರುವ, ಎಲ್ಲರಿಗೂ ವಸತಿದಾಯಕನೂ, ಆಶ್ರಯದಾತನೂ ಆಗಿರುವ ಇನ್ದ್ರನೇ, **ಅಸ್ಯ ನಃ ವಿದ್ಧೀ** ನಮ್ಮ ಈ ಎಲ್ಲಾ ಸ್ತೋತ್ರಗಳ ಭಾವನೆಗಳನ್ನೂ ಅರಿತವನಾಗು.

ಸಮಸ್ತರಿಗೂ ಆಶ್ರಯದಾತನೂ ಎಲ್ಲರ ಐಶ್ವರ್ಯಗಳಿಗೆ ಒಡೆಯನೂ ಆದ ಇನ್ದ್ರನೇ ನಾವು ನಿನ್ನವರಾಗಬೇಕೆಂದು ನಮಸ್ಕರಿಸುವ ಸ್ತುತಿಸುವ ನಮ್ಮ ಹೃದ್ಗತ ಭಾವನೆಗಳನ್ನು ತಿಳಿಯುವವನಾಗು.

ಕಾಮವರ್ಷಕನೂ ವಸತಿದಾಯಕನೂ ಆದ ಇನ್ದ್ರನೇ ನಿನ್ನ ಸಹಾಯಾಪೇಕ್ಷೆಯಿಂದ ಅತಿಶಯವಾಗಿ ಸ್ತೋತ್ರಮಾಡುವ ನಮ್ಮ ಸ್ತೋತ್ರಗಳನ್ನು ಕೇಳಿಸಿಕೊಂಡು ನಮ್ಮ ಕಾಮನೆಗಳನ್ನು ಪೂರ್ಣಗೊಳಿಸು.

*ಬಯಸಿದುದನೊಲವಿನಿಂ ಮಳೆಗರೆವ ಮಹನೀಯನೇ!*
*ನಿನ್ನವರ್‌ನಾಮ್, ನಿನ್ಗೊಳರ್ಪಿತರ್, ಶರಣಾದವರ್ ।*
*ನಮ್ಮಿಂಗಿತವನರಿತು ಪೊರೆವುದಯ್! ದೇವದೇವ! ॥*

## ಋಕ್ - ೧೩೩

ತ್ರಿಶೋಕಃ ಕಾಣ್ವಃ । ಗಾಯತ್ರೀನ್ದ್ರಃ ॥

೨ ३ ೨ ३ ೨ ३ ೧ ೨ ३ ೧ ೨ ३ ೧ ೨ ३ ೨
ಆ ಘಾ ಯೇ ಅಗ್ನಿಮಿನ್ಧತೇ ಸ್ತೃಣನ್ತಿ ಬರ್ಹಿರಾನುಷಕ್ ।

३ ೨ ३ ೨ ३ ೧ ೨
ಯೇಷಾಮಿನ್ದ್ರೋ ಯುವಾ ಸಖಾ ॥ ೯ - ೧೩೩ ॥

೨ ३ ೨ ३ ೨ ३ ೧ ೨ ३ ೧ ೨ ३ ೨ ३ ೨ ३
ಆ - ಘ - ಯೇ - ಅಗ್ನಿಂ - ಇನ್ಧತೇ । ಸ್ತೃಣನ್ತಿ - ಬರ್ಹಿಃ - ಅನುಷಕ್ - ಅನು -

೨ ೧ ೨೦ ೧ ೨೦ ೧ ೨೦ ೧ ೨೦ ३
ಷಕ್ ॥ ಯೇಷಾಂ - ಇನ್ದ್ರಃ - ಯುವಾ - ಸಖಾ - ಸ - ಖಾ ॥ ೯. ೧೩೩ ।

ಐಧ್ಮವಾಹಾನಿ ಹಾರಾಣವಾತ್ರೀಣಿ । ತ್ರಯಾಣಾಂ ಇಧ್ಮವಾಹೋ ಗಾಯತ್ರೀನ್ದ್ವಃ ॥

೫೦ ೦ ೦ ೪ ೫ ೨ ೧ ೦

೧೩೩.೧. ಆಘಾಯೇಆಗ್ನಿಮಿನ್ಧಾತಾಇ ॥ ಸ್ತೃಣನ್ತಿಬರ್ಹಿರಾನುಷಾ

೨೦ ೧೦ ೦ ೦

ಕ್ ॥ ಯೇಷಾಮಿನ್ದ್ರೋಯುವಾಇಹಾ ॥ ಊವಾಇ ।

೫ ೪ ೫

ಊವೋ೨೩೪ । ವಾ ॥ ಸಾ೫ಖೋ೬ಹಾಇ ॥

ದೀ - ೮ । ಪ - ೭ । ಮಾ - ೬ । ಞೂ । ೧೧ । ೨೨೨ ॥

ಇಹವದ್ವೈಧ್ಮವಾಹಮ್ ॥

೫೦ ೦ ೪ ೨ ೧ ೨^ ೩ ೫

೧೩೩.೨. ಆಘಾಯಇಹಾ ॥ ಗ್ನಿಮಾಇ । ಧಾತಾಓ೨೩೪ವಾ ।

೩ ೫ ೨ ೧ ೨^ ೩

ಈ೨೩೪ಹಾ । ಸ್ತೃಣನ್ತಿಬರ್ಹಿ೩ರಾ । ನೂಷಾಓ೨೩೪

೫ ೩ ೫ ೨೦ ೧ ೨^ ೩

ವಾ । ಈ೨೩೪ಹಾ ॥ ಯೇಷಾಮ್ । ಆಇನ್ದ್ರಓ೨೩೪

೫ ೩ ೫ ೧ ೮ ^ ೩

ವಾ ॥ ಈ೨೩೪ಹಾ ॥ ಯುವಾ । ಯುವಾ೨ಸಾ೨೩೪

೩ ೫

ಖಾ೬ಹಿ ॥ ಈ೨೩೪ಹಾ ॥

ದೀ - ೩ । ಪ - ೧೩ । ಮಾ - ೭ । ಡೇ । ೧೨ । ೨೨೩ ॥

೫೦೦ ೦೦ ೫ ೨ ೧ ೨^ ೩೦

೧೩೩.೩. ಔಹೋಆಘಾಯಾ೬ಏ ॥ ಗ್ನಿಮಾಇನ್ಧಾತಾ । ಔಹೋ೨

೨ ೧ ೨^ ೩೦
೨೩೪ವಾ । ಸ್ತೃಣನ್ತಿಬರ್ಹಿಃ೨೩ರಾನೂಷಾ । ಔಹೋ೨೨೩

೩ ೨೦ ೧ ೨^ ೩೦ ೩
೪ವಾ ॥ ಯೇಷಾಮಾಇನ್ದ್ರಾ ॥ ಔಹೋ೨೨೩೪ವಾ ॥

೩ ೨ ೧ ೩ ೩
ಯುವಾ೨೩ । ಸಾ೨೨೩೪ಖಾ । ಉಹುವಾ೨೬ಹಾಉ ॥

ವಾ ॥ *ದೀ - ೮ । ಪ - ೧೧ । ಮಾ - ೫ । ಟು । ೧೩ । ೨೨೪ ॥*

**ಯೇ** ಋಷಯಃ **ಆ** ಘಾ ಆಭಿಮುಖ್ಯೇನ ಖಲು **ಅಗ್ನಿಮ್** ಇನ್ಧತೇ ದೀಪಯನ್ತಿ **ಯೇಷಾಂ** ಚ **ಯುವಾ** ನಿತ್ಯ ತರುಣಃ **ಇನ್ದ್ರಃ ಸಖಾ** ಭವತಿ ತೇ **ಆನುಷಕ್** ಆನುಪೂರ್ವ್ಯೇಣ **ಬರ್ಹಿಃ** ಸ್ತೃಣನ್ತಿ ॥ ಸ್ತ್ರಿಣನ್ತಿ ಸ್ತೃಣನ್ತಿ ಚ ಪಾಠೌ ॥

**ಯೇ** ಯಾರು, ಯಾಜ್ಞಿಕರು, **ಆ,ಘಾ** ಅಭಿಮುಖವಾಗಿ, **ಅಗ್ನಿಮ್** ಅಗ್ನಿಯನ್ನು, ಇನ್ಧತೇ ಪ್ರಜ್ವಲಿಸುವರೋ, **ಯೇಷಾಮ್** ಅಂತಹವರಿಗೆ, **ಇನ್ದ್ರಃ** ವೃಷ್ಟಿಕರ್ತೃವಾದ ಇನ್ದ್ರನು, **ಯುವಾ** ಶಕ್ತಿಬಲಗಳಿಂದ ಕೂಡಿದ, **ಸಖಾ** ಅನುಕೂಲಕರ ಮಿತ್ರ, **ಆನುಷಕ್** ಒಂದಕ್ಕೊಂದು ಒತ್ತಿಕೊಂಡಂತೆ ಕ್ರಮಪೂರ್ವಕವಾಗಿ ಆನುಷಕ್ - ಕ್ರಮಪೂರ್ವಕನಾಮ ನಿರು.೬.೧೪. *॥* **ಸ್ತೃಣನ್ತಿ ಬರ್ಹಿರಾನುಷಕ್** ಋ.*೮.೪೫.೧.* ॥ **ಬರ್ಹಿಃ** ದರ್ಭೆಯನ್ನು ಆಸನಕ್ಕಾಗಿ, **ಸ್ತೃಣನ್ತಿ** ಹರಡುವರು.

ಂ

ತಮ್ಮ ಅಭಿಮುಖವಾಗಿ ಅಗ್ನಿಯನ್ನು ಪ್ರಜ್ವಲಿಸಿ ವಿಧಿಪೂರ್ವಕವಾಗಿ ಅಗ್ನಿ ಪರಿಚರ್ಯೆ ಮಾಡುವವರಿಗೆ ಯಜ್ಞಮಾಡುವವರಿಗೆ, ಸಮಸ್ತ ಇಷ್ಟಾರ್ಥಪ್ರದ ನಾದ ಇನ್ದ್ರನು ಯಾವಾಗಲೂ ಬಲಿಷ್ಠನೂ ಹಿತೈಷಿಯೂ ಆದ ಯುವಕ ಮಿತ್ರನಂತಿರುತ್ತಾನೆ.

ಅಭಿಮುಖತೆಯಿಂದಗ್ನಿಯಂ ಜ್ವಲಿಸಿ ವಿಧಿಪೂರ್ವಕಂ
ಪರಿಚರ್ಯೆಯನ್ನೆಸಗಿ ಸವನಿಪಗಿಂದ್ರನೆಂದುಂ ।
ಬಯಸಿದುದನೀವ ಯುವಮಿತ್ರನಂತಿರ್ಪನೊಲಿದು ॥

## ಋಕ್ - ೧೩೪

ತ್ರಿಶೋಕಃ ಕಾಣ್ವಃ । ಗಾಯತ್ರೀನ್ದ್ರಃ ॥

೩ ೨u ೩ ೨ ೩ ೨ ೩ ೨ ೩ ೧ ೨ ೩ ೧ ೨೦
ಭಿನ್ಧಿ ವಿಶ್ವಾ ಅಪ ದ್ವಿಷಃ ಪರಿ ಬಾಧೋ ಜಹೀಮೃಧಃ ।

೧ ೨ ೩ ೨೦
ವಸುಸ್ಪಾರ್ಹಂತದಾ ಭರ ॥ ೧೦.೧೩೪ ॥

*ಸ್ವ - ೮ । ಉ - ೩ । ಧಾ - ೩೨ ॥ ಡಾ ॥ ದ - ೪ ॥*

೩ ೨ ೧ ೨೦ ೧ ೨೦ ೧ ೨೦ ೧ ೨೦ ೧ ೨೦ ೩ ೨ ೧ ೨೦ ೧ ೨೦
ಭಿನ್ಧಿ - ವಿಶ್ವಾಃ - ಅಪ - ದ್ವಿಷಃ । ಪರಿ - ಬಾಧಃ - ಜಹಿ - ಮೃಧಃ ॥ ವಸು -

೩ ೨ ೩
ಸ್ಪಾರ್ಹಂ - ತತ್ - ಆ - ಭರ ॥

*ಆ - ೩೮ । ಅ - ೧೬ । ಪ - ೧೪೨ । ಟಾ । ದ - ೪ ॥*

*ಇತಿ ಚತುರ್ಥೀ ದಶತಿಃ । ೪ । ದ್ವಿತೀಯಃ ಖಣ್ಡಃ ॥ ೨ ॥*

ಪೈಡ್ವಸ್ಯ ಪೈಲ್ವಸ್ಯ ವಾ ಸಾಮ । ಪೈಲ್ವೋ ಗಾಯತ್ರೀನ್ದ್ರಃ ॥

೫ ೪ ೧ ೨^ ೩
೧೩೪.೧. ಭಿ । ಧ್ಯೋಹಾಇ ॥ ವಾಇಶ್ವಾಅಪಾ । ದ್ವಾಇಷಾಓ೨೩೪

೫ ೧ ೨^ ೩ ೫ ೧೦ ೦
ವಾ ॥ ಪಾರಾಓ೨೩೪ವಾ ॥ ಬಾಧೋಜಹಾಇ । ಮಾ

೨^ ೩ ೫ ೧ ೨ ೦ ೧ ೦ ೨೩ ೧೧೧

ದ್ಧಾರ್ಓಽ೨೩೪ವಾ ॥ವಸುಸ್ಪಾರ್ಹನ್ತದಾಭರಾಽ೨೩೪೫ ।

*ದೀ - ೪ । ಪ - ೮ । ಮಾ - ೮ । ದ್ವೈ । ೧೪ । ೨೨೫ ॥*

*ದ್ವಾವಿಂಶತಿಃ ॥ ದ್ವಿತೀಯಃ ಖಣ್ಡಃ ॥ ೨ ॥ ದ್ವಿತೀಯಾ ದಶತಿಃ ॥ ೨ ॥*

ಹೇ **ಇನ್ದ್ರ! ವಿಶ್ವಾಃ** ಸರ್ವಾಃ **ದ್ವಿಷಃ** ದ್ವೇಷ್ಟ್ರೀಃ ಶತ್ರುಸೇನಾಃ **ಅಪಭಿನ್ಧಿ** ವಿದಾರಯ **ಬಾಧಃ** ಹಿಂಸಿತ್ರೀಃ **ಮೃಧಃ** ಸಂಗ್ರಾಮಾನ್ ಸ್ಪೃಧಃ ಮೃಧಃ ಇತಿ ಸಂಗ್ರಾಮನಾಮಸು ಪಠಿತತ್ವಾತ್ **ಪರಿಜಹೀ** ಹಿಂಸ್ಯಾಃ । ತತಃ ತಾಸಾಂ ಸ್ಪಾರ್ಹಂ ಸ್ಪೃಹಣೀಯಂ **ತತ್** ಪ್ರಸಿದ್ಧಂ **ವಸು ಆ ಭರ** ಅಸ್ಮಭ್ಯಮ್ ಆ ಹರ ॥

**ವಿಶ್ವಾಃ ದ್ವಿಷಃ** ಸಮಸ್ತ ದ್ವೇಷಿಸುವ ಶತ್ರುಗಳನ್ನೂ, **ಅಪಿಭಿನ್ಧಿ** ನಾಶ ಗೊಳಿಸು, **ಬಾಧಃ ಮೃಧಃ ಪರಿಜಹಿ** ವಿಘ್ನಗಳನ್ನುಂಟುಮಾಡುವ ವೈರಿಗಳನ್ನು ನಷ್ಟ ಗೊಳಿಸು, **ಸ್ಪಾರ್ಹಮ್ ತತ್ ವಸು** ಕಾಮನಾಯೋಗ್ಯವಾದ ಐಶ್ವರ್ಯವನ್ನು, **ಆಭರ** ಸಮೃದ್ಧಿಯಾಗಿ ಅನುಗ್ರಹಿಸು.

ಭಗವಂತನಾದ ಇನ್ದ್ರನೇ ನಮ್ಮನ್ನು ದ್ವೇಷಿಸುವ ಶತ್ರುಗಳನ್ನು ನಾಶ ಮಾಡು. ಪ್ರಗತಿಗೆ ಬಾಧಕಗಳಾದ ವಿಘ್ನಗಳನ್ನು ನಿವಾರಿಸು. ಹಿಂಸೆಗಳಿಗೊಳಗು ಮಾಡುವ ಪ್ರವೃತ್ತಿಗಳನ್ನೂ ಯುದ್ಧಗಳನ್ನೂ ನಿಲ್ಲಿಸು. ನಮಗೆ ಭೋಗಯೋಗ್ಯ ವಾದ ಐಶ್ವರ್ಯವನ್ನು ಸಮೃದ್ಧಿಯಾಗಿ ಅನುಗ್ರಹಿಸು.

*ದೇವೇಂದ್ರ! ನಮ್ಮ ಹಗೆಗಳನಳಿಸಿ, ವಿಘ್ನವಳಿಸಿ*
*ಹಿಂಸೆಗೆಡೆಯೀವ ಕೊಳ್ಗುಳಗಳಂ ತಡೆದು ಹಿಡಿದು ।*
*ಭೋಗಯೋಗಾರ್ಹಸಂಪದವೀಯುತೊಲ್ದು ಹರಸು ॥*

# ಋಕ್ - ೧೩೫

ಕಣ್ವೋ ಘೌರಃ । ಗಾಯತ್ರೀನ್ದ್ರಃ ॥

೩ ೧ ೨ ೩ ೨ ೩ ೧ ೨ ೩ ೧ ೨೦
ಇಹೇವ ಶೃಣ್ವ ಏಷಾಂ ಕಶಾ ಹಸ್ತೇಷು ಯದ್ವದಾನ್ ।

೧ ೨೦ ೩ ೧ ೨
ನಿ ಯಾಮಂ ಚಿತ್ರಮೃಞ್ಜತೇ ॥ ೧.೧೩೫ ॥

೩ ೨ ೩ ೧ ೨೦ ೧ ೨೦ ೧ ೨೦
ಇಹ - ಇವ - ಶೃಣ್ವೇ - ಏಷಾಂ । ಕಶಾಃ - ಹಸ್ತೇಷು - ಯತ್ - ವದಾನ್ ॥ ನಿ

೧ ೨೦ ೩ ೨ ೩
- ಯಾಮನ್ - ಚಿತ್ರಂ - ಋಞ್ಜತೇ ॥ ೧.೧೩೫ ॥

ಐಷಮ್ ಇಷೋ ಗಾಯತ್ರೀನ್ದ್ರಃ ಮರುತೋ ವಾ ॥

೨ ೧೧ ೪ ೫೦ ೧ ೦ ೦ ೨
೧೩೫.೧. ಇಹೇವಾऽ೨೩೪ಶೃಣ್ವಏಷಾಮ್ ॥ ಕಶಾಹಸ್ತೇಷುಯಾऽ೧

೨ ೨ ೦ ೪ ೨ ೩ ೫
ದ್ವಾऽ೩ದಾನ್ । ನಿಯಾಮಂಚೀऽ೩ತ್ರಾऽ೩ಮೃಞ್ಜತಾಇ ॥

೨ ೧೧ ೨ ೧ ೬ ^ ೩ ೫ ೩೦
ನಿಯಾಮಂಚಾಇ । ತ್ರಮಾऽ೨ಇಞ್ಜಾऽ೨೩೪ತಾಇ ॥ ಏ

೨ ೩೦ ೪೦ ೫ ೨೦ ೧೦ ೨೦
ಹಿಯಾऽ೩೪ । ಔಹೋವಾ ॥ ಏಹಿಯಾಹೋಇ । ಏಹಿ

೧೦ ೫
ಯಾಹೋऽ೨೩ಇ । ಏऽ೨೩೪ಹೀ ॥

*ದೀ - ೧೩ । ಪ - ೧೦ । ಮಾ - ೮ । ಶ್ಯೈ । ೧೫ । ೨೨೬ ॥*

**ಏಷಾಂ** ಮರುತಾಂ **ಹಸ್ತೇಷು** ಸ್ಥಿತಾಃ **ಕಶಾಃ** ಸ್ವಸ್ವ ವಾಹನ ತಾಡನ ಹೇತವಃ **ಯದ್ವದಾನ್** ಯದ್ ವದನ್ತಿ ಧ್ವನಿಂ ಕುರ್ವನ್ತಿ, ತಂ ಧ್ವನಿಂ **ಇಹೇವ** ಅತ್ರೈವ ಸ್ಥಿತ್ವಾ **ಶೃಣ್ವೇ** ಶೃಣೋಮಿ । ಸ ಧ್ವನಿ ವಿಶೇಷಃ **ಯಾಮಮ್** ಸಂಗ್ರಾಮೇ **ಚಿತ್ರಂ** ವಿವಿಧಂ ಶೌರ್ಯಂ **ನ್ಯೃಞ್ಜತೇ** ನಿತರಾಮಲಂ ಕರೋತಿ ಋಞ್ಜತಿಃ ಪ್ರಸಾಧನಕರ್ಮಾ (೬.೪.೨೪) ಇತಿಯಾಸ್ಕಃ ॥

ಏತದುಕ್ತಂ ಭವತಿ - ವಾಸಹಾರಿಣೋ ವಾಸೇನ ಗೃಹೀತೇನ ಪಶೋಸ್ತರ್ಪಣಾಯ ಪರಮಯಾಪ್ರೀತ್ಯಾ ಯುಕ್ತಾಸ್ತಮಾನೇನ ಪಶುಂ ಪಶ್ಯನ್ತಿ । ತದ್ವನ್ಮದೀಯಾ ಋತ್ವಿಜಃ ಸೋಮವನ್ತಃ ತೇನೈವ ಸೋಮೇನ ಗೃಹೀತೇನ ತರ್ಪಣಾರ್ಥಂ ತ್ವಾಂ ಪಶ್ಯನ್ತೀತ್ಯರ್ಥಃ ॥ ೨ಂ //

**ಏಷಾಂ ಹಸ್ತೇಷು ಕಶಾಃ** ಈ ಮರುದ್ಗಣಗಳ ಕೈಗಳಲ್ಲಿರುವ ಚಾವಟಿಗಳು, **ಯದ್ವದಾನ್** ಹೀಗೆ ಧ್ವನಿಸುವ, ಇಹ ಇವ **ಶೃಣ್ವೇ** ಈ ಮಾತುಗಳನ್ನು ಹತ್ತಿರದಲ್ಲೇ ಇಲ್ಲೇ ಮಾತನಾಡಿದಂತೆ ಸ್ಪಷ್ಟವಾಗಿ ಕೇಳುತ್ತೇನೆ. ಈ ಧ್ವನಿಯು, **ಯಾಮಂ** ಯುದ್ಧದಲ್ಲಿ, **ಚಿತ್ರಂ ನ್ಯೃಂಜತೇ** ಚಿತ್ರವಿಚಿತ್ರವಾಗಿ ನಾನಾಪ್ರಕಾರವಾದ ಶೌರ್ಯಸಾಹಸಗಳನ್ನು ಪ್ರಕಾಶಗೊಳಿಸುತ್ತದೆ.

ರಥಾದಿ ಚಾಲಕರ ಕೈಯಲ್ಲಿರುವ ಚಾವಟಿಗಳಿಂದುಂಟಾಗುವ ಧ್ವನಿ ಮತ್ತು ಜನರು ಪರಸ್ಪರ ಮಾತನಾಡಿಕೊಳ್ಳುವುದು ಗಾಳಿಯ ಮೂಲಕ ನಮ್ಮ ಕಿವಿಗೆ ಕೇಳಿಸಿ ಉತ್ಸಾಹವನ್ನೂ ಪ್ರೇರಣೆಯನ್ನೂ ನೀಡುವುದರಿಂದ - ಮರುತ್ತಗಳ ಚಾವಟಿ ಎಂದಿದೆ - ಯುದ್ಧದಲ್ಲಿ ಚಿತ್ರವಿಚಿತ್ರವಾದ ಶೌರ್ಯ ಸಾಹಸಗಳು ಪ್ರಕಟವಾಗುತ್ತಿರುವಂತೆ ಪ್ರೋತ್ಸಾಹವುಂಟಾಗುತ್ತದೆ.

ಕಶಾವಾಙ್ನಾಮ - ನಿ.ಘಂ.೧.೧೧, ಮರುತಃ ಋತ್ವಿಜಃ - ನಿ.ಘಂ. ೩.೧೮., ಋಞ್ಜತಿ ಪ್ರಸಾಧನಕರ್ಮ - ನಿರು.೬.೨೧ ಎಂದು ಗ್ರಹಿಸಿದರೆ ಯಜ್ಞ

ಪ್ರಸಂಗದಲ್ಲಿ ಋತ್ವಿಜರು ಪಠಿಸುವ ವೇದಮನ್ತ್ರಗಳು ಸಾಮಗಾನಗಳು ಕಿವಿಗಳ ಮೂಲಕ ಯಾಜಕನ ಹೃದಯ ಮನಸ್ಸುಗಳನ್ನು ಪ್ರವೇಶಿಸಿ ಆಕ್ರಮಿಸಿ ಆಧ್ಯಾತ್ಮಿಕ ಪ್ರೇರಣೆಯನ್ನುಂಟುಮಾಡಿ ಭಗವಂತನ ಸಾಕ್ಷಾತ್ಕಾರಕ್ಕೆ ಅನುವು ಮಾಡಿಕೊಡುತ್ತವೆ.

ಮರುತರ ಕರದೊಳಿರ್ಪ ಚಾವಟಿಯ ಹಾಗೆ ಬಲ್ಪಿಂ
ಧ್ವನಿಪ ಋತ್ವಿಗ್ಜನರ ನುಡಿಗಳವು ಗಾಳಿಯಲ್ಲಿ ।
ರಣಸಾಹಸೋತ್ಸಾಹದಂತೆ ಚೋದಿಸುತಲಿಹುವು ॥

## ಋಕ್ - ೧೩೬

ತ್ರಿಶೋಕಃ ಕಾಣ್ವಃ । ಗಾಯತ್ರೀನ್ದ್ರಃ ॥

೩ ೧ ೨ ೩ ೧ ೨ ೩ ೧೨ ೩ ೧ ೨
ಇಮ ಉ ತ್ವಾ ವಿ ಚಕ್ಷತೇ ಸಖಾಯ ಇನ್ದ್ರ ಸೋಮಿನಃ ।

೩ ೧ ೨ ೩ ೧ ೨ ೩ ೨
ಪುಷ್ಟಾವನ್ತೋ ಯಥಾ ಪಶುಮ್ ॥ ೨.೧೩೬ ॥

೩ ೨ ೩ ೨ ೩ ೧ ೨೦ ೩
ಇಮೇ - ಉ - ತ್ವಾ - ವಿ - ಚಕ್ಷತೇ । ಸಖಾಯಃ - ಸ - ಖಾಯಃ - ಇನ್ದ್ರ -

೧ ೨ ೩ ೧ ೨ ೧ ೨೦ ೩ ೨
ಸೋಮಿನಃ ॥ ಪುಷ್ಟಾವನ್ತಃ - ಯಥಾ - ಪಶುಮ್ ॥ ೨.೧೩೬ ॥

ಪೌಷಮ್ । ಪೂಷಾಗಾಯತ್ರೀನ್ದ್ರಃ ಮರುತಃ ॥

೪ ೩ ೪ ೦ ೩ ೪ ೫ ೦ ೨ ೪ ೫ ೧ ೦
೧೩೬.೧. ಇಮಉತ್ವಾವಿಚಕ್ಷತೇ । ಏ೨೩ । ಸಖಾಯಾಃ ॥ ಇನ್ದ್ರಸೋ

